

# ಸಿದ್ಧಗಂಗಾ



ಮೇ ೨೦೦೧




ಪರಮಪೂಜ್ಯ ಶ್ರೀಶ್ರೀಗಳವರಿಂದ ಆಶೀರ್ವಚನ



ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್ ಅವರಿಗೆ ಪರಮಪೂಜ್ಯ ಶ್ರೀಶ್ರೀಗಳವರಿಂದ ಆಶೀರ್ವಾದ



ಪರಮಪೂಜ್ಯ ಶ್ರೀಶ್ರೀ ಗಂಗಾಧರ ಮಹಾಸ್ವಾಮಿಗಳವರಿಗೆ ಪರಮಪೂಜ್ಯ ಶ್ರೀಶ್ರೀಗಳವರಿಂದ ಗೌರವ ಸಮರ್ಪಣೆ

ಮುಖಪುಟ

ಏಪ್ರಿಲ್ ೧ರಂದು ಶ್ರೀಮಠದಲ್ಲಿ ನಡೆದ
ಶ್ರೀ ಗುರುವಂದನ ಮಹೋತ್ಸವದ
ವಿವಿಧ ದೃಶ್ಯಗಳು

ಪ್ರಧಾನ ಸಂಪಾದಕ
ಪ. ಚೆನ್ನಪ್ಪಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ– ೫೭೨ ೧೦೪

ಮುದ್ರಕರು :
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು– ೫೪
ದೂರವಾಣಿ : ೩೩೪೪೦೮೭





॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭ ಮೇ ೨೦೦೧ ಸಂಚಿಕೆ : ೫

ಒಳಪುಟಗಳಲ್ಲಿ........



| ವಿಳಾಸ : | ಚಂದಾ ವಿವರ : | |
|---|---|---|
| ''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಅಜೀವ ಸದಸ್ಯತ್ವ | ರೂ. ೫೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



# ವಿಸ್ಮಯಕ್ಕೆ ಭಕ್ತಿ ನಮನ....

'ಸ ರ್ಕಾರಿ ಕಾರ್ಯಕ್ರಮವಾಗಿ ಮುಂದಿನ ವರ್ಷದಿಂದ ಬಸವ ಜಯಂತಿಯನ್ನು ಆಚರಿಸಲಾಗುವುದು- ರಾಜ್ಯದ
ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರ ಘೋಷಣೆ. ದಿನಾಂಕ ೨೬.೪.೨೦೦೧ರಂದು
ಬೆಂಗಳೂರಿನಲ್ಲಿ ನಡೆದ ಬಸವ ವೇದಿಕೆ ಸಮಾರಂಭದಲ್ಲಿ ಪ್ರಕಟ. ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ಸಂದರ್ಭ.
ವಂದನೆಗಳು ಮುಖ್ಯಮಂತ್ರಿಗಳಿಗೆ. ಬಸವಣ್ಣನವರು ಒಂದು ವರ್ಗದ, ಒಂದು ವರ್ಣದ, ಒಂದು ಜಾತಿಯ ನಾಯಕರಾದವರಲ್ಲ. ಸಮಗ್ರ
ಮನುಕುಲದ ಅಭಿವೃದ್ಧಿಗೆ ಹೋರಾಡಿದವರು. ಇಂದು ಸರ್ಕಾರ ರೂಪಿಸಿರುವ, ಯೋಜಿಸಿರುವ ಅದೆಷ್ಟೋ ಸಾಮಾಜಿಕ ಸುಧಾರಣೆಗಳ ಮೂಲ
ಬೀಜ ಬಸವಣ್ಣನವರು ಆಚರಿಸಿ ತೋರಿಸಿದ ತತ್ವಗಳಲ್ಲಿವೆ. ಮನುಕುಲದ ಏಳಿಗೆಗಾಗಿ ಭಿನ್ನ ಭೇದ ಮುಕ್ತ ಸಂಸ್ಕೃತಿಯನ್ನು ರೂಢಿಸಿದವರು
ಬಸವಣ್ಣನವರು. ಶ್ರಮಿಕ ಸಂಸ್ಕೃತಿಯ ಆರಾಧಕರಾದವರು. ಅಸ್ಪೃಶ್ಯತೆಯ ನಿವಾರಣೆಯನ್ನು ವಿಸ್ಮಯವೆಂಬಂತೆ ವಿನೂತನವಾದ ರೀತಿಯಲ್ಲಿ
ಅಂದರೆ ಆತ್ಮವಿಶ್ವಾಸದ ಅಡಿಗಲ್ಲ ಮೇಲೆ ಕೈಗೊಂಡ ರೀತಿ ಯಾವತ್ತಿಗೂ ಪ್ರಸ್ತುತ. ಹೃದಯ ಪರಿವರ್ತನೆಯ ಮೂಲಕ
ಹೊಲೆಯ-ಮಾದಿಗರೆಂಬುದನ್ನು ತೊಡೆದು ಹಾಕಿದರು. ಮಹಾಮಾಹೇಶ್ವರರೆಂದು ಅವರನ್ನು ಗೌರವಿಸಿ ಎದೆಗಪ್ಪಿಕೊಂಡರು. ವಿಶ್ವದ ಇತಿಹಾಸದಲ್ಲಿ
ಅತ್ಯಂತ ಅಪರೂಪದ ಉದಾಹರಣೆಯಾಗಿ ಎದ್ದು ನಿಂತವರು. ಮಹಾತ್ಮಾ ಗಾಂಧೀಜಿಯವರು, ಡಾ. ಅಂಬೇಡ್ಕರರವರು ಈ ದಿಸೆಯಲ್ಲಿ
ಹೋರಾಟವನ್ನು ಕೈಗೆತ್ತಿಕೊಳ್ಳುವುದಕ್ಕೆ ಮೊದಲು ಹರಿಜನ ಸಮಸ್ಯೆಯನ್ನು ಕಂಡವರು. ಅದರ ನಿವಾರಣೆಗಾಗಿ ''ಹೃದಯದಿಂದ'' ಹೋರಾಡಿದವರು
ಬಸವಣ್ಣ. ಸ್ತ್ರೀಯರ ಉದ್ಧಾರಕ್ಕಾಗಿ ಶ್ರಮಿಸಿದ ಅವರ ರೀತಿ ನಿಜಕ್ಕೂ ದಿಟ್ಟವಾದದ್ದು. ಧಾರ್ಮಿಕ ಸ್ವಾತಂತ್ರ್ಯವನ್ನು ಸ್ತ್ರೀಯರಿಗೆ, ಶೂದ್ರರಿಗೆ
ತಂದುಕೊಟ್ಟು ಮಾನವತೆಯನ್ನು ಎತ್ತಿ ಹಿಡಿದ ಧೀರ ಹಿಮಾಲಯ ಅವರು. ರಾಜಕಾರಣವನ್ನು ಪವಿತ್ರಗೊಳಿಸಿದ ಪವಾಡ ಪುರುಷರು.
''ಹೊನ್ನಿನೊಳಗೊಂದೊರೆಯ, ವಸ್ತ್ರದೊಳಗೊಂದೆಳೆಯ, ಅನ್ನದೊಳಗೊಂದಗುಳ ಸ್ವಾರ್ಥಕ್ಕಾಗಿ ಬಳಸೆನೆಂದು'' ಪ್ರಮಾಣ ವಚನ ಸ್ವೀಕರಿಸಿ,
ಅದರಂತೆ ನಡೆದುಕೊಂಡ ವಿರಳ ರಾಜನೀತಿಜ್ಞ ಬಸವಣ್ಣನವರು. ವ್ಯಕ್ತಿಯ ಪ್ರಾಮಾಣಿಕತೆಗೆ ಶುದ್ಧ ಚಾರಿತ್ರ್ಯಕ್ಕೆ, ಕ್ರಿಯಾಶೀಲ ಆಡಳಿತಕ್ಕೆ
ಹೊಸ ವ್ಯಾಖ್ಯಾನ ಬರೆದವರು. ರಾಜಕೀಯವನ್ನು ಆಧ್ಯಾತ್ಮೀಕರಣಗೊಳಿಸಿದ ಧರ್ಮದೀಪ ಬಸವಣ್ಣನವರು. ಬಸವಣ್ಣನವರು ಅಪ್ಪಟ ಕನ್ನಡಿಗರು.
ಕನ್ನಡ ಭಾಷಾಭಿವೃದ್ಧಿಗಾಗಿ ದುಡಿದವರು. ತನ್ನ ಬಳಿ ಬಂದೆಲ್ಲರನ್ನು ಕನ್ನಡ ಭಾಷಾ ಪ್ರೇಮಿಗಳನ್ನಾಗಿಸಿದವರು. ಅನಕ್ಷರಿಗಳಿಂದಲೂ ಅಮೂಲ್ಯ
ವಚನಗಳನ್ನು ಸೃಷ್ಟಿಸಿದವರು. ''ಅಮೃತ ಗಣ, ದೇವಗಣ''ಗಳ ಲೆಕ್ಕಾಚಾರಕ್ಕೆ ಕಟ್ಟು ಬೀಳದೆ ''ಆನು ಒಲಿದಂತೆ'' ಹಾಡಿದ ವಿನೂತನ ಸಾಹಿತ್ಯ
ಸೃಷ್ಟಿಗೆ ಕಾರಣರಾದವರು. ಸಮಾಜವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ಶ್ರೀಮಂತ-ಬಡವರ ನಡುವೆ ಕಾಯಕ ಸೇತುವೆಯನ್ನು ಕಟ್ಟಿ
ದಾಸೋಹ ಸಂಸ್ಕೃತಿಯನ್ನು ರೂಪಿಸಿದ ಸಮಾಜ ವಿಜ್ಞಾನಿ ಅವರು. ಪ್ರಜಾಪ್ರಭುತ್ವದ ಮೂಲ ಮಂತ್ರವಾದ ಬಸವಣ್ಣ ಆಧುನಿಕ ಮನಸ್ಸುಗಳಿಗೆ
ಹತ್ತಿರವಾಗುತ್ತಾರೆ. ವಿನಯವೆಂಬುದು ಅತ್ಯಪೂರ್ವ ಆಡಳಿತ ಸೂತ್ರ. ಅದನ್ನು ಅರಿತು ಆಚರಣೆಯಲ್ಲಿಟ್ಟುಕೊಂಡ ಬಸವಣ್ಣನವರು ಆಡಳಿತಗಾರರಿಗೆ
ಒಂದು ದೊಡ್ಡ ಆದರ್ಶ. ''ಎನಗಿಂತ ಕಿರಿಯರಿಲ್ಲ'' ಎಂಬ ಅವರ ಸದ್ಭಾವದ ಮಾತು, ಸದುವಿನಯಕ್ಕೆತ್ತಿದ ಸೇವಾಧ್ವಜ.

ಬಸವಣ್ಣನವರ ವ್ಯಕ್ತಿತ್ವದ ಶಿಖರ ದರ್ಶನ ಮಾಡಿಕೊಂಡ ಕರ್ನಾಟಕ ಸರ್ಕಾರ ಅವರ ಜಯಂತಿಯನ್ನು ಸರ್ಕಾರದ ಕ್ರಮವಾಗಿ ಆಚರಿಸಲು
ತೆಗೆದುಕೊಂಡಿರುವ ಸದಾಶಯ ನಿಜಕ್ಕೂ ಸ್ವಾಗತಾರ್ಹ, ಶ್ಲಾಘನೀಯ. ಬಸವಶ್ರೀ ಪ್ರಶಸ್ತಿಯನ್ನು ಕೊಡುವುದರ ಜೊತೆಗೆ ಬಸವ ಕ್ಷೇತ್ರಗಳ
ಅಭಿವೃದ್ಧಿಗೆ ಸಮಗ್ರ ಯೋಜನೆಯನ್ನು ಕೈಗೆತ್ತಿಕೊಂಡಿರುವುದು ನಾಡಿನ ಪುಣ್ಯ. ಬಸವಣ್ಣನವರು ನಡೆಸಿದ ಕ್ರಾಂತಿ ಇತರ ಕ್ರಾಂತಿಕಾರರಂತೆ
ಸೀಮಿತವಾದುದಲ್ಲ. ಮಾನವ ಕಲ್ಯಾಣದ ಸಮಗ್ರ ಕ್ರಾಂತಿ. ರಾಷ್ಟ್ರ ನಿರ್ಮಾಣಕ್ಕೆ ಅವರು ತೋರಿಸಿದ ದಾರಿ ರಾಷ್ಟ್ರೀಯ ಹೆದ್ದಾರಿ. ಒಂದು ಕಡೆ
ಅವರು ಸಮೂಹ ನಾಯಕ, ಸ್ವತಂತ್ರ ವಿಚಾರಶೀಲ, ಕ್ರಾಂತಿಕಾರಿ. ಇನ್ನೊಂದು ಕಡೆ ಅನುಭಾವಿ, ದಾರ್ಶನಿಕ ಕವಿ, ಪ್ರವಾದಿ, ವಿಭೂತಿಪುರುಷ,
ನೊಂದವರ, ಬೆಂದವರ ಪ್ರತಿನಿಧಿ. ಮಾತಿಲ್ಲದಂತಿದ್ದವರಿಗೆ ಮಾತಾದವರು, ದನಿಯಿಲ್ಲದವರಿಗೆ ಕೊರಳಾದವರು. ಪೂಜೆ ವೈಯಕ್ತಿಕ. ಪೂಜೆಯ
ಫಲ ಸಾರ್ವತ್ರಿಕವೆಂದು ಆಚರಿಸಿದವರು. ಹೆಪ್ಪುಗಟ್ಟಿದ ಅಜ್ಞಾನದ ಅಂಧಕಾರದಲ್ಲಿ ಥಟ್ಟನೆ ಮಿಂಚಿನ ಸಂಚಲನವಾಗಿ ಬೆಳಗಿದವರು ಬಸವಣ್ಣ.
ಲೋಕದ ಡೊಂಕೆಂದರೆ, ಮಹಾನುಭಾವರನ್ನು, ಮಹಾತ್ಮರನ್ನು, ಮಹಾಪುರುಷರನ್ನು, ಜಾತಿಗೆ, ಭಾಷೆಗೆ, ಪ್ರದೇಶಕ್ಕೆ, ಕಾಲಕ್ಕೆ ಕಟ್ಟಿಹಾಕುವ ಕೆಟ್ಟ
ಉತ್ಸಾಹ, ಬುದ್ಧ, ಬಸವ, ಗಾಂಧಿ, ಅಂಬೇಡ್ಕರರಂಥವರು ಯಾವುದೇ ಒಂದು ಜಾತಿ, ಭಾಷೆ, ಪ್ರದೇಶ, ಕಾಲಕ್ಕೆ ಸೀಮಿತರಾದವರಲ್ಲ. ಅವರು
ವಿಶ್ವಪೂಜ್ಯರು, ವಿಶ್ವವಂದನೀಯರು, ಬಸವಣ್ಣನವರು ಅಂಥ ವಿರಳರಲ್ಲಿ ವಿರಳರೂ, ವಿಮಲ ಪರಂಜ್ಯೋತಿ ಸ್ವರೂಪರು.

ಸನ್ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಆರ್. ಗುಂಡೂರಾಯರು ಬಸವ ಜಯಂತಿಯಂದು ರಜೆ ಘೋಷಿಸಿ ಗೌರವಿಸುವ ಮೂಲಕ
ಬಸವ ತತ್ವಾಭಿಮಾನಿಗಳ ಪ್ರೀತಿಗೆ ಪಾತ್ರರಾದವರು. ಇದೀಗ ಬಸವ ಜಯಂತಿಯನ್ನು ಸರ್ಕಾರದ ಕಾರ್ಯಕ್ರಮವಾಗಿ ಆಚರಿಸುವ ನಿರ್ಧಾರ
ಕೈಗೊಂಡಿರುವ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರು ಎಲ್ಲ ಕನ್ನಡಿಗರ ಪ್ರೀತಿಗೆ ಪಾತ್ರರಾಗಿದ್ದಾರೆ. ತಾವು ತೆಗೆದುಕೊಂಡ
ನಿರ್ಧಾರ ಕಾರ್ಯಾಚರಣೆಗೆ ಬರುವಂತೆ ಸೂಕ್ತಕ್ರಮವನ್ನು ಮುಖ್ಯಮಂತ್ರಿಗಳು ತೆಗೆದುಕೊಳ್ಳಲಿ-ರಾಜ್ಯಪತ್ರದಲ್ಲಿ ಪ್ರಕಟಿಸಲಿ ಎಂದು ಸಿದ್ಧಗಂಗಾ
ಆಶಿಸುತ್ತದೆ. ಸರ್ಕಾರಕ್ಕೆ ವಂದಿಸುತ್ತದೆ.

– ಸಂಪಾದಕ







# ಸತ್ಯಶುದ್ಧ ಕಾಯಕ

ಒಂ ದೂರಿನಲ್ಲಿ ಒಬ್ಬ ಶ್ರೀಮಂತನಿದ್ದ. ಗುರುಲಿಂಗ ಜಂಗಮ ಪ್ರೇಮಿಯಾಗಿದ್ದ. ಸ್ವಭಾವದಲ್ಲಿ ಉದಾರಿ. ಕಾಯಕದಲ್ಲಿ ಸದ್ಭಾವಿ. ದಾಸೋಹದಲ್ಲಿ ಅನನ್ಯ ಪ್ರೇಮಿ. ಅವನದು ತುಂಬು ಕುಟುಂಬ. ಮಡದಿ ಮಕ್ಕಳು ಆತನಿಗೆ ಅನುಕೂಲಕರರು. ಆಳು-ಕಾಳುಗಳು ಅವನ ಕಣ್ಸನ್ನೆ ಕೈಸನ್ನೆಯರಿತು ಕೆಲಸ ಮಾಡುತ್ತಿದ್ದರು. ಆಳುಕಾಳುಗಳಿಗೆ ತನ್ನ ಮನೆಯ ಅಕ್ಕಪಕ್ಕದಲ್ಲಿಯೆ ಗುಡಿಸಲುಗಳು. ಅವು ಪ್ರೀತಿಯ ಕುಟೀರಗಳು. ತಮ್ಮ ಯಜಮಾನನಿಗೆ ಭವ್ಯವಾದ ಮನೆ. ತಮಗೆ ಜೋಪಡಿಗಳೆಂಬ ಅಸೂಯೆಯನ್ನರಿಯದ ಮನಸ್ಸುಗಳು ಆ ಗುಡಿಸಲುಗಳಲ್ಲಿ. ಅವುಗಳಲ್ಲಿ ಒಬ್ಬಳು ವಯಸ್ಸಾದ, ಹಣ್ಣು ಹಣ್ಣಾದ ಮುದುಕಿ. ಸ್ವಾಭಿಮಾನ, ಸ್ವಾವಲಂಬಿ ಮನೋಧರ್ಮದ ಕಾಯಕ ನಿಷ್ಠೆಯ ಕಷ್ಟಜೀವಿ. ಅವರಿವರ ಮನೆಯಲ್ಲಿ ಕೂಲಿ ಕುಂಬಳ ಮಾಡಿ ಜೀವಿಸಿದ್ದಳು.

ಒಂದು ದಿನ ಶ್ರೀಮಂತನ ಮನೆಗೆ ಒಬ್ಬರು ಸ್ವಾಮಿಗಳು ಆಗಮಿಸಿದರು. ಅವರ ಪೂಜೆ ಪ್ರಸಾದಕ್ಕೆ ದಿವಿನಾದ ವ್ಯವಸ್ಥೆಯಾಯಿತು. ಸ್ವಾಮಿಗಳ ದರ್ಶನಕಾಗಿ ಊರಿಗೆ ಊರೇ ಬಂದಿತು. ಒಂದು ನಂಬಿಕೆಯಂತೆ-ಮಕ್ಕಳ ಮನೆಗೆ ಗುರುದರ್ಶನಕ್ಕೆ, ದೇವರಗುಡಿಗೆ ಬರೀ ಕೈಯ್ಯಲ್ಲಿ ಯಾರೂ ಹೋಗಬಾರದು ಎಂಬ ಸಂಪ್ರದಾಯಕ್ಕನುಸರಿಸಿ, ಸ್ವಾಮಿಗಳ ದರ್ಶನಕ್ಕೆ ಬಂದವರೆಲ್ಲ ತಮ್ಮತಮ್ಮ ಭಕ್ತಿ ಕಾಣಿಕೆಯನ್ನರ್ಪಿಸಿದರು. ಅಜ್ಜಿಯೂ ಕಾಣಿಕೆ ತಂದಿದ್ದಳು. ಹಣದ ರೂಪದಲ್ಲಿ ಅಲ್ಲ; ಉತ್ತಮವಾದ ಅಕ್ಕಿಯ ರೂಪದಲ್ಲಿ. ಶ್ರೀಮಂತರ ಮನೆಯೊಡತಿಗೆ ಆ ಅಕ್ಕಿಯ್ನನು ಕೊಟ್ಟು ಅಜ್ಜಿ ಸ್ವಾಮಿಗಳಿಗೆ ಈ ಅಕ್ಕಿಯಲ್ಲಿ ಅನ್ನ ಮಾಡಿ ಪ್ರಸಾದ ನೀಡಿರಿ ಎಂದು ಕೇಳಿಕೊಂಡಳು. ಅಕ್ಕಿ ಬಂಗಾರದಂತಿದ್ದುದನ್ನು ನೋಡಿದ ಮನೆಯೊಡತಿ ಒಪ್ಪಿದಳು. ಅದರಲ್ಲಿ ಅನ್ನ ಮಾಡಿ ಸ್ವಾಮಿಗಳಿಗೆ ಪ್ರಸಾದ ನೀಡಿದಳು. ಪ್ರಸಾದ ಮಾಡುತ್ತಿದ್ದ ಸಂದರ್ಭದಲ್ಲಿ ಸ್ವಾಮಿಗಳು ಪೂಜಾ ಕೋಣೆಯ ಮೂಲೆಯತ್ತ ಯಾಕೋ ಕಣ್ಣಾಡಿಸಿದರು. ಅಲ್ಲೊಂದು ಸುಂದರವಾದ ಬೆಳ್ಳಿಯ ಬೆತ್ತವಿತ್ತು. ತುಂಬಾ ಆಕರ್ಷಣೀಯವಾಗಿ ಕಂಡಿತು. ಅದನ್ನು ಕದಿಯಬೇಕಲ್ಲಾ ಎಂಬ ಯೋಚನೆ ಬಂತು. ಯಾರಿಗೂ ಗೊತ್ತಾಗದಂತೆ ಅದನ್ನು ಕದ್ದು ಮುಚ್ಚಿಡಬೇಕೆಂದು ನಿರ್ಧರಿಸಿದರು. ಪ್ರಸಾದವಾಯಿತು. ಶ್ರೀಮಂತ ಭಕ್ತ ಉದಾರವಾಗಿ ಕಾಣಿಕೆ ಅರ್ಪಿಸಿ ಬೀಳ್ಕೊಟ್ಟ. ಹೋಗುವಾಗ ಸ್ವಾಮಿಗಳು ಬೆಳ್ಳಿ ಬೆತ್ತ ಕದ್ದು ಸಾಗಿಸಿದರು ಯಾರಿಗೂ ತಿಳಿಯದಂತೆ. ತಮ್ಮ ಮಠಕ್ಕೆ ಬಂದ ಮೇಲೆ ತಮಗೆ ಚಿಂತೆಗಿಟ್ಟುಕೊಂಡಿತು. ಇದೇನಿದು ಇಂತಹ ಸಣ್ಣ ಕೆಲಸ ಮಾಡಿದೆ. ಮನಸ್ಸಿಗೇಕೆ ಈ ಕೆಟ್ಟ ಯೋಚನೆ ಬಂತು. ಕಳ್ಳತನ ಮಾಡುವ ಪ್ರಲೋಭನೆಯಾಕಾಯಿತು ಎಂದುಕೊಂಡರು. ಸರಿ, ವಿಚಾರಿಸಿ ನೋಡೋಣವೆಂದು ತೀರ್ಮಾನಿಸಿದರು. ಶ್ರೀಮಂತನ ಮನೆಯವರನೆಲ್ಲಾ ವಿಚಾರಿಸಿದರು. ಮನೆಯೊಡತಿಯನ್ನು ಕೇಳಿದರು. ತಾಯಿ, ನೀವು ನೀಡಿದ ಪ್ರಸಾದಕ್ಕೆ ಬಳಸಿದ ಅಕ್ಕಿ ಎಲ್ಲಿಂದ ತಂದದ್ದು ಎಂದು ಕೇಳಿದರು. ಅದಕ್ಕೆ ಆ ತಾಯಿ ತನಗೆ ಅಜ್ಜಿ ತಂದುಕೊಟ್ಟಿದ್ದನ್ನು ಹೇಳಿದರು. ಸ್ವಾಮಿಗಳು, ಆ ಅಜ್ಜಿಯ್ನನು ಕರೆಸಿ ಕೇಳಿದರು. ಅದಕ್ಕೆ ಅಜ್ಜಿ ಹೀಗೆ ಹೇಳಿದಳು "ಬುದ್ಧೀ ಎಲ್ಲರೂ ತಮಗೆ ಕಾಣಿಕೆ ಕೊಡುತ್ತಿದ್ದುದನ್ನು ನೋಡಿದೆ. ನಾನು ಏನಾದರೂ ಕೊಡಬೇಕು ಎಂದುಕೊಂಡೆ. ನನ್ನಲ್ಲಿ ಏನೂ ಇರಲಿಲ್ಲ. ನಿನ್ನೆ ಪಕ್ಕದ ಮನೆಗೆ ಅಕ್ಕಿ ಕುಟ್ಟುವುದಕ್ಕೆ ಹೋಗಿದ್ದಾಗ ಸ್ವಲ್ಪ ಅಕ್ಕಿಯನ್ನು ಯಾರಿಗೂ ಗೊತ್ತಾಗದಂತೆ ಸೆರಗಿನಲ್ಲಿ ಮುಚ್ಚಿಟ್ಟುಕೊಂಡು ತಂದಿದ್ದೆ. ಅಷ್ಟನ್ನೇ ತಂದು ಅಮ್ಮಾವ್ರಿಗೆ ಕೊಟ್ಟು ತಮಗೆ ಪ್ರಸಾದಕ್ಕಾಗಿ ಕೊಟ್ಟಿದ್ದೆ" ಎಂದು ಹೇಳಿದಳು. ಸ್ವಾಮಿಗಳಿಗೆ ಅರ್ಥವಾಯಿತು. ತಮಗೇಕೆ ಬೆಳ್ಳಿ ಬೆತ್ತ ಕದಿಯುವ ಮನ ಮೈಲಿಗೆಯಾಯಿತೆಂದು. ಕದ್ದು ತಂದ ಅಕ್ಕಿಯ ಅನ್ನ ಪ್ರಸಾದದಿಂದ ಕಳ್ಳತನದ ಬುದ್ಧಿ ಬಂದಿತೆಂದು ಅರಿತರು. ಯಾರ ಸಂಬಂಧವಾದ ಪ್ರಸಾದ ಸ್ವೀಕರಿಸುತ್ತೇವೆಯೋ ಆ ಸಂಬಂಧವಾದ ಭಾವ ನಮ್ಮದಾಗುತ್ತದೆ. ಅದಕ್ಕೆ ಶರಣರು "ಸತ್ಯ ಶುದ್ಧ ಕಾಯಕ"ಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟರು. ಕಾಯಕ ಮನ-ಮೈ-ಮಾತುಗಳನ್ನು ಪವಿತ್ರಗೊಳಿಸವ ಮಣಿಹ.

ಓಂ



## ಶ್ರೀ ಸಿದ್ಧಲಿಂಗೇಶ್ವರನ ವಚನ

*ಸಟ್ಟುಗ ಸವಿಯಬಲ್ಲುದೆ?*
*ಅಟ್ಟಮದಕೆ ಉಣಬಲ್ಲುದೆ ಅಯ್ಯಾ?*
*ಬಟ್ಟ ಬಯಲು ಕಟ್ಟು ಗುಟ್ಟಿಗೊಳಗಾಗ ಬಲ್ಲುದೆ?*
*ನಿಷ್ಠೆಹೀನರಿಗೆ ಲಿಂಗ ಕಟ್ಟಳೆಗೆ ಬರಬಲ್ಲುದೆ?*
*ಕರಕಷ್ಟರಿರಾ ಸುಮ್ಮನಿರಿ ಭೋ*
*ಕಟ್ಟಲೆಗೆಯ್ದುದ ಮಹಾ ಘನದಲ್ಲಿ*
*ಮನಮುಟ್ಟಿ ಹಿಮ್ಮೆಟ್ಟದೆ ಅಡಗಿದಾತನೆ*
*ಅಚಲಿತ ಮಹೇಶ್ವರನು ನೋಡಾ*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.*

ಸವಟು ಯಾವಾಗಲೂ ಬೇರೆ ಬೇರೆ ಪಾಕರಸಗಳಲ್ಲಿ ಓಡಾಡಿದರೂ ಅದಕ್ಕೆಂದೂ ಆ ಪಾಕರಸದ ಅನುಭವವಾಗುವುದಿಲ್ಲ. ತನ್ನಲ್ಲಿಯೇ ಸಿದ್ಧವಾದ ಅನ್ನವನ್ನು ಪಾತ್ರೆಯು ಸವಿಯದು. ಆಕಾಶವು ಯಾರ ಬಂಧನಕ್ಕೂ ಒಳಪಡದು. ಹಾಗೆಯೇ ನಿಷ್ಠೆಯಿಲ್ಲದ ವ್ಯಕ್ತಿಗಳು ಲಿಂಗವನ್ನು ಕಟ್ಟಿಕೊಂಡಿದ್ದರೂ ಅದರ ಲಾಭವನ್ನು ಹೊಂದಲಾರರು. ಯಾವನು ಕಟ್ಟಿಕೊಂಡ ಲಿಂಗದಲ್ಲಿ ನಿಷ್ಠೆಯಿಟ್ಟು ಪೂಜಿಸಿ ಅದರಲ್ಲಿ ಒಂದಾಗುವನೋ ಅವನೇ ಶ್ರೇಷ್ಠ ಭಕ್ತನೆಂದು ಹೇಳಿಸಿಕೊಳ್ಳುವನು.

(ಕೃಪೆ: ಷಟ್‌ಸ್ಥಲ ಜ್ಞಾನಸಾರಾಮೃತ - ಶ್ರೀ ತೋಂ. ಸಿ.
ಕೈಂ.ಸೇ.ಸಂಘ, ಎಡೆಯೂರು - ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅರಿವಿನನುಭಾವವೆ ಅರವಿಂದಸುಂದರವೆ
ಗುರುಲಿಂಗ ಜಂಗಮ ನಿಜದಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಜಾಗೃತ ಬೆಳಕೆ ಜೀವ ಸುಂದರ ನೌಕೆ
ಮಾನವತೆ ಬೆಳಗಿಸಿರುವ ಸಿರಿ ಬದುಕೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುಖರೂಪಶ್ರೀ ಶಿವನೆ ತಪರೂಪ ಶಾಂತವೆ
ಸೇವಾಶ್ರೀಸಿಂಧುವಾಹಿನಿಯೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇಹ ನಿರ್ದೇಹಿಯೆ ಭಾವ ನಿರ್ಭಾವಿಯೆ
ನಿರ್ಲಿಪ್ತ ನಿರುಪಮ ಜ್ಯೋತಿಯೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕಕಾಮಿಯೇ ದಾಸೋಹ ಮೋಹಿಯೆ
ಪಾವನಪ್ರಸಾದಿಯೆ ತವನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಳಶುದ್ಧಿ ಹೊರಶುದ್ಧಿ ಸಮದರ್ಶಿ ಜಂಗಮವೆ
ನಳನಳಿಸಿ ಅರಳಿರುವ ಅನುಭಾವವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸ್ವಾಧ್ಯಾಯ ಶೀಲವೆ ಪ್ರವಚನ ಪ್ರಣತಿಯೆ
ವಚನಾನು ಶೀಲನ ಪುಣ್ಯವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಲಶುದ್ಧಿನಿಧಿಯೆ ಭಾವ ಶುದ್ಧಿ ಬೆಳಕೆ
ಪಾಕಶುದ್ಧಿಯ ವ್ರತದ ಶ್ರೀಮಹವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭೋಗವಿಮುಖ ವಿಭುವೆ ರಾಗರಹಿತ ರವಿಯೆ
ಯೋಗಶಿವಸುಂದರ ಶ್ರೀ ಜಗವೇ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ಭಾವ ನಿರುಪಮ ನಿತ್ಯ ನಿರಂಜನ
ಸತ್ಯ ಶಿವಸುಂದರ ಹಿಮಗಿರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಅಣ್ಣನ ಕಣ್ಣಿನಲ್ಲಿ

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು–೮೨

ನಾವು ಪ್ರತಿವರ್ಷ "**ಬಸವ ಜಯಂತಿ**" ಆಚರಿಸಿಕೊಂಡು ಬರುತ್ತಿದ್ದೇವೆ. ಅದೊಂದು ವಾರ್ಷಿಕ ಮತಾಚಾರಣೆಯ ಸ್ಥಿತಿಯಾಗಿದೆ. ಆಚರಣೆಗೆ ಬಸವಣ್ಣನ ಭಾವಚಿತ್ರ ಇಟ್ಟು ಪೂಜಿಸುತ್ತೇವೆ. ಆದರೆ ಅವನ ತತ್ತ್ವಾಚರಣೆಯ ಸತ್ಯಜ್ಞಾನ ನಮಗಿಲ್ಲ. ಅವನ ಭಾವಚಿತ್ರದ ಕಣ್ಣು ಸೂಸುವ ಅರಿವಿನ ಬೆಳಕು ನಮಗೆ ಅರ್ಥವಾಗಿಲ್ಲ. ಅವನನ್ನು ಹಾಡಿ ಹೊಗಳುವ ನುಡಿ ಜಾಣ್ಮೆಗೇನೂ ನಮ್ಮಲ್ಲಿ ಕೊರತೆಯಿಲ್ಲ. 'ತುದಿ ನಾಲಿಗೆ ಕಸ್ತೂರಿ, ಹೃದಯ ಕತ್ತರಿ" ಆತ್ಮನಿರೀಕ್ಷೆಮಾಡಿಕೊಳ್ಳಬೇಕು. "ನೀರಬೊಬ್ಬುಳಿಗೆ ಕಬ್ಬುನದ ಕಟ್ಟುಕೊಟ್ಟು ರಕ್ಷಿತ" ಮಾಡುವ ನಮ್ಮ ಅಬ್ಬರ ಕಂಡು ಅಣ್ಣನ ಭಾವಚಿತ್ರ ನಿಬ್ಬೆರಗಾಗಿರಬೇಕು!

ನಾವು ಶರಣ ಸಂಸ್ಕೃತಿಯ ವಾರಸುದಾರರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ಆದರೆ ತನುಮನಧನ ಹಿಂದಿಟ್ಟುಕೊಂಡು, ಮಾತಿನ ಬಣವೆಯ ಮುಂದಿಟ್ಟುಕೊಂಡು' ನಡೆಯುತ್ತೇವೆ. 'ಹಸಿದು ಬಂದ ಗಂಡಂಗೆ ಉಣಲಿಕ್ಕದೆ ಹೆಬಡವಾದೆವೆಂದು' ಮರುಗುತ್ತೇವೆ. ನಮ್ಮ ನಮ್ಮ ಮನವ ಸಂತೈಸಿಕೊಳ್ಳದೆ ಲೋಕದ ಡೊಂಕ' ತಿದ್ದಲೆತ್ನಿಸುತ್ತೇವೆ. 'ಇವ ನಮ್ಮವ, ಇವ ನಮ್ಮವ' ಎನ್ನುವ ಸಂಸ್ಕೃತಿ ನಮ್ಮದು ಎಂದು ಹೇಳುತ್ತಲೇ ನಮಗೆ ನಾವೇ ಪರಸ್ಪರ ದೂರಿಕೊಳ್ಳುತ್ತೇವೆ. ನಮ್ಮನ್ನು ನಾವೇ ಮಾರಿಕೊಳ್ಳುತ್ತೇವೆ. ಮಣ್ಣ ಬೊಂಬೆಯನ್ನು ತೊಳೆದು ಕೆಸರು ಕಳೆಯುವ' ಸಾಹಸ ನಮ್ಮದಾಗಿದೆ.

'ಅಂಗದ ಮೇಲೆ ಲಿಂಗವಿದ್ದವರನೆಲ್ಲ ಒಂದೇ ಎಂಬೆ' ಎಂಬ ಅಣ್ಣನ ಮಾತನ್ನು ಮಣ್ಣುಗೂಡಿಸಿದ್ದೇವೆ. 'ನಮಗೆ ನಾವೇ ಮುನಿಯುತ್ತಿದ್ದೇವೆ', ಮನೆಯೊಳಗಣ ಕಿಚ್ಚು ಮನೆಯ ಸುಡುವುದೆಂಬ' ಪರಿವೆಯೂ ನಮಗಿಲ್ಲ. ಮತಿಯಿಲ್ಲದ ಮರುಳ'ರಾಗಿದ್ದೇವೆ. 'ಭಕ್ತಿಯಿಲ್ಲದ ಬಡವ'ರಾಗಿದ್ದೇವೆ. ಮನಕ್ಕೆ ಮಾತಿನನಾಚಿಕೆಯಿಲ್ಲ; ಮಾತಿಗೆ ಮನದನಾಚಿಕೆಯಿಲ್ಲ...' ಕಂಬಳಿಯಲ್ಲಿ ಕಣಕವ ನಾದುವ ಕೆಲಸ ನಡೆದೇ ಇದೆ. 'ಲೋಕೋಪಚಾರಕ್ಕೆ ಮಜ್ಜನಕ್ಕೆರೆಯುವ' ಲಾಂಛನ. 'ಮನದ ಕಸ' ತೊಳೆದಿಲ್ಲ. 'ಒಳಗೆ ಕುಟಿಲ, ಹೊರಗೆ ವಿನಯ'. ವ್ಯಕ್ತಿ ಪ್ರತಿಷ್ಠೆ ಸಮಾಜ ದೇಗುಲದ 'ಹೊನ್ನಕಳಶ'ವಾಗಿದೆ.

ಈ ವ್ಯವಸ್ಥೆ ಅಣ್ಣನ ಕಾಲಕ್ಕಿಂತ ಭಿನ್ನವಾಗಿದೆ ಎಂದು ನನಗನಿಸುವುದಿಲ್ಲ ನಿಜ. ಅವನ ಕಾಲದಲ್ಲಿ ಅನಕ್ಷರತೆಯಿತ್ತು; ಅಂಧಶ್ರದ್ಧೆಯಿತ್ತು; ರಾಜಶಾಹಿಯಿತ್ತು; ಪುರೋಹಿತಶಾಹಿಯಿತ್ತು. ಇಂದು ಸಾಕ್ಷರತೆ ಬಂದಿದೆ; ವಿಚಾರವಾದ ಬಂದಿದೆ; ಪ್ರಜಾಸತ್ತೆ ಬಂದಿದೆ; ಪುರೋಹಿತಶಾಹಿ ಈಗಲೂ ಇದೆ. ಆದರೆ... ಸಾಕ್ಷರತೆ ಸಂಕೋಚದ ಸಂಕೋಲೆಯಲ್ಲಿದೆ; ವಿಚಾರವಾದ ವಿವಂಚನೆಗೊಳಗಾಗಿದೆ; ಪ್ರಜ್ಞಾಸತ್ತೆ ಪರಿತಾಪಕ್ಕೆ ಸಿಕ್ಕಿದೆ; ಪುರೋಹಿತಶಾಹಿ ಎಲ್ಲರಂಗಗಳಲ್ಲೂ ಚಿಗುರೊಡೆದಿದೆ.

ಈ ಹಿನ್ನೆಲೆಯಲ್ಲಿ ಬದುಕಿಗೆ ಶರಣ ಸಂಸ್ಕೃತಿಯ ಸಂಸ್ಕಾರ ನೀಡಬೇಕಾಗಿದೆ. ನಾವು ಹುಟ್ಟುತ್ತಲೇ ಸಾವನ್ನು ಕಟ್ಟಿಕೊಂಡೇ ಬಂದಿದ್ದೇವೆ. ಹುಟ್ಟು ಆಕಸ್ಮಿಕ, ಸಾವು ನಿಶ್ಚಿತ. ಹುಟ್ಟು-ಸಾವುಗಳ ಮಧ್ಯೆ ಇರುವುದೇ ಬದುಕು. ಈ ಬದುಕು ತನಗಷ್ಟೇ ಅಲ್ಲ; ಸುತ್ತಣ ಪರಿಸರಕ್ಕೂ ಸಹ್ಯವಾಗಬೇಕು; ಸಹಾಯವಾಗಬೇಕು; ನೆಮ್ಮದಿ ನೀಡಬೇಕು. ಇಂತಹ ಬದುಕಿಗೆ ಶರಣಸಂಸ್ಕೃತಿ ಎಂದೆಂದಿಗೂ ಬತ್ತದ ಜಲಮೂಲ; ಸವೆಯದ ಸಾಮಗ್ರಿ; ಆರದ ಬೆಳಕು; ತಿಳಿಗಾಳಿ. ವಾಸ್ತವವಾಗಿ ಶರಣ ಸಂಸ್ಕೃತಿ ಒಂದು ಶಿಸ್ತು. ನಿಸರ್ಗದಷ್ಟೇ ಅದು ಸಹಜ; ಸಾಧ್ಯ.

ಅಣ್ಣ ಬಸವಣ್ಣನ ಕಣ್ಣು ಸೂಚಿಸುತ್ತದೆ: 'ಅರಿದರೆ ಶರಣ ಮರೆದಡೆ ಮಾನವ'. ಆದ ಕಾರಣ ನಮ್ಮ ಮದವಳಿದು ನಿಜವುಳಿ'ಯಬೇಕು. ನಾವು 'ಕಾಯವಂಚಕರಾಗಬಾರದು''; 'ಜೀವ ವಂಚಕರಾಗಬಾರದು'. 'ಸುಖಕ್ಕೆ ತುಂಬಿದ ದೀವಿಗೆ' ಮನೆಯನ್ನೇ ಸುಡುವಂತಾಗಬಾರದು. 'ಕಂಗಳೊಳಗಣ ಕಸವ ಕಳೆ'ಯಬೇಕು ಅಷ್ಟೇ ಅಲ್ಲ; 'ಸರ್ವಾಂಗ ತಲೆದೊಳೆ'ಯಬೇಕು. ನಮ್ಮಲ್ಲಿ 'ಸತ್ಯವಿದೆ, ಸಮಾಧಾನವಿದೆ'. 'ಅದು ಮನಕ್ಕೆ ಬಾರದಿದ್ದರೆ' ಹೇಗೆ? ನಮ್ಮದು 'ಮರುಳು ತಲೆ ಹರಳು ತಲೆ' ಆಗಬಾರದು. 'ಭ್ರಾಂತಳದ ಭಾವ' ನೆಲೆನಿಲ್ಲಬೇಕು. ಅಂತಾದರೆ 'ಬಸವ ಜಯಂತಿ' ಸಾರ್ಥಕವಾಗುತ್ತದೆ. ❖

### ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಪರಮಪೂಜ್ಯ

## ಡಾ || ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೪ನೇ ಶ್ರೀ ಗುರುವಂದನ ಮಹೋತ್ಸವ

ವರದಿ : ಎಚ್.ಎಸ್. ಸಿದ್ಧಗಂಗಪ್ಪ

'ನಾವು ಮಾಡುವ ಚಿಂತನೆಗಳು ನಮಗಷ್ಟೇ ಸೀಮಿತ ವಾಗಬಾರದು. ಸಮಾಜದ ಒಳಿತಿಗಾಗಿ ಚಿಂತನೆ ಗಳು ವ್ಯಾಪಕವಾಗಬೇಕು. ಭರತ ಖಂಡ ಜಗತ್ತಿಗೆ ಒಂದು ದೊಡ್ಡ ಕೊಡುಗೆಯನ್ನು ಕೊಟ್ಟಿದೆ. ಮಾನವ ಮಾನವನನ್ನು ಪ್ರೀತಿಸುವುದೇ ನಿಜವಾದ ಮಾನವ ಧರ್ಮ. ಮಾನವ ಧರ್ಮದ ಮಹಾ ಸಂದೇಶ ಪ್ರತಿಯೊಬ್ಬ ವ್ಯಕ್ತಿ ತಾನು ಮಾನವನೆಂಬುದನ್ನು ಮರೆಯದೇ ಮನುಷ್ಯನಾಗಿ ಬದುಕುವ ಕಲೆಯನ್ನು ಕಲಿತುಕೊಳ್ಳಬೇಕು" ಎಂದು ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ|| ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಿಳಿಸಿದರು.

ಪರಮಪೂಜ್ಯ ಶ್ರೀಶ್ರೀಗಳವರು ೯೩ ವಸಂತಗಳನ್ನು ಸಾರ್ಥಕವಾಗಿ ಮುಗಿಸಿ ೯೪ನೇ ವಸಂತವನ್ನು



ಶ್ರೀ.ಮ.ನಿ.ಪ್ರ.ಸ್ವ ಶ್ರೀ ಶ್ರೀ ಗಂಗಾಧರಮಹಾಸ್ವಾಮಿಗಳವರಿಂದ ೯೪ ಜ್ಯೋತಿಗಳನ್ನು ಬೆಳಗಿಸುವುದರ ಮೂಲಕ ಸಮಾರಂಭದ ಉದ್ಘಾಟನೆ.








ಶ್ರೀ ಶ್ರೀ ಗಂಗಾಧರ ಮಹಾಸ್ವಾಮಿಗಳವರಿಂದ ಉದ್ಘಾಟನಾ ನುಡಿ

ಸಂಭ್ರಮದಿಂದ ಬರಮಾಡಿಕೊಳ್ಳುವ ಶುಭ ಸಂದರ್ಭದಲ್ಲಿ ಏಪ್ರಿಲ್ ೧ ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಭಕ್ತಿಭಾವಗಳ ಸಮ್ಮಿಲನಗೊಂಡ ಗುರುವಂದನ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಶ್ರೀಗಳವರು ಆಶೀರ್ವಚನ ನೀಡುತ್ತಿದ್ದರು.

ನಾಡಿನ ವಿವಿಧ ಜಿಲ್ಲೆಗಳಿಂದ ಹಾಗೂ ನೆರೆ ರಾಜ್ಯ ಗಳಿಂದ ತಂಡೋಪತಂಡವಾಗಿ ಭಕ್ತರು ಆಗಮಿಸಿ ಪರಮ ಪೂಜ್ಯರ ದಿವ್ಯದರ್ಶನ ಪಡೆದು ಸಾರ್ಥಕತೆಯನ್ನು ಪಡೆದು ಕೊಂಡರು. ಸುಮಾರು ೫೦ ಸಾವಿರ ಜನ ಭಕ್ತರು ಸಮಾರಂಭ ದಲ್ಲಿ ಭಾಗವಹಿಸಿದ್ದರು. ಪ್ರತಿಯೊಬ್ಬರ ಮುಖದಲ್ಲಿ ಸಂತೋಷ, ಧನ್ಯತೆಯ ಭಾವ ಮಪ್ಪರಿಗೊಂಡಿತ್ತು.

ಪರಮ ಪೂಜ್ಯ ಶ್ರೀಶ್ರೀಗಳವರು ಅನುಗ್ರಹ ಭಾಷಣದಲ್ಲಿ "ಇಂದು ದೇಶ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ರಾಮ ರಾಜ್ಯದ ಕನಸು ನನಸಾಗಬೇಕಾದರೆ ಜಾತಿ-ವರ್ಗ ಭಾವನೆ ಅಳಿದು ವಿಶಾಲ ಭಾವನೆ ಬೆಳೆಸಿಕೊಳ್ಳಬೇಕು. ವಿಜ್ಞಾನವನ್ನು ಬಳಕೆ ಮಾಡಿಕೊಳ್ಳುವ ದೃಷ್ಟಿ ಬದಲಾಗ ಬೇಕಾಗಿದೆ. ವಾತಾವರಣ ಕಲುಷಿತ ವಾಗುತ್ತಿದೆ. ವಿಷಮ ವಾತಾವರಣ ಸಮಾಜ ವನ್ನು ದುರ್ಬಲಗೊಳಿಸುತ್ತಿದೆ" ಎಂದು ವಿಷಾದಿಸಿದರು.

ದಿವ್ಯ ಸಾನ್ನಿಧ್ಯ ವಹಿಸಿದ್ದ ಬೈಲಹೊಂಗಲದ ಜಗದ್ಗುರು ಶಾಖಾ ಮೂರು ಸಾವಿರ ಮಠದ ಶ್ರೀಶ್ರೀ ಗಂಗಾಧರ ಮಹಾಸ್ವಾಮಿಗಳವರು ರಾಜ್ಯಪಾಲರ ಅನುಪಸ್ಥಿತಿಯಲ್ಲಿ ೯೪ ಜ್ಯೋತಿಗಳನ್ನು ಬೆಳಗಿಸಿ ಸಮಾರಂಭ ಉದ್ಘಾಟಿಸಿ "ಜಾತಿ-ವರ್ಗ-ವರ್ಣಗಳಿಂದ ಕೂಡಿದ್ದ ಸಮಾಜವನ್ನು ೧೨ನೇ ಶತಮಾನದಲ್ಲಿ ಒಗ್ಗೂಡಿಸಿದ ಬಸವಣ್ಣನವರ ಹಾದಿಯಲ್ಲಿಯೇ ಶ್ರೀ ಸಿದ್ದಗಂಗಾ ಶ್ರೀಗಳು ನಡೆದು ಬಂದಿದ್ದಾರೆ. ಜಾತಿ ಭೇದವೆಣಿಸದೆ ಲಕ್ಷಾಂತರ ಜನ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸಿ ಸಮಾಜದಲ್ಲಿ ಗೌರವಯುತವಾಗಿ ಬಾಳು ವಂತೆ ಮಾಡಿದ್ದಾರೆ. ಇದು ನಿಜಕ್ಕೂ ಶ್ಲಾಘನೀಯ ಸಂಗತಿ" ಎಂದು ತಿಳಿಸಿದರು.

ಭಕ್ತಿ ಸಮರ್ಪಣೆ ಮಾಡಿದ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು "ಪರಮಪೂಜ್ಯ ಶ್ರೀಶ್ರೀಗಳವರೇ ಒಂದು ಜ್ಯೋತಿಯಾಗಿದ್ದಾರೆ. ಸಹಸ್ರಾರು ವಿದ್ಯಾರ್ಥಿಗಳ ಬದುಕನ್ನು ತಮ್ಮ ದಿಟ್ಟ ಪ್ರಭೆಯಿಂದ ಬೆಳಗಿಸುತ್ತಿದ್ದಾರೆ. ಕಾಯಕ-ಶಿವಯೋಗದ ಪುಣ್ಯವನ್ನು ಸಮಾಜಕ್ಕೆ ನೀಡುತ್ತಿದ್ದಾರೆ. ಅವರ ಬದುಕು ನಮಗೆ ದಾರಿದೀಪ" ಎಂದರು.



ಸಮಾರಂಭದಲ್ಲಿ ವಿವಿಧ ಮಠಗಳ ಹರಗೂರು ಚರಮೂರ್ತಿಗಳು

**ಸಮುದಾಯ ಭವನದ ಶಿಲಾನ್ಯಾಸ**

ಎರಡು ಕೋಟಿ ರೂ.ಗಳ ವೆಚ್ಚದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಸಮುದಾಯ ಭವನದ ಶಿಲಾನ್ಯಾಸವನ್ನು ನೆರವೇರಿಸಿದ ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಕೇಂದ್ರ ಸಚಿವರಾದ ಶ್ರೀ ಅನಂತಕುಮಾರ್ ಅವರು ಮಾತನಾಡಿ "ಜಗತ್ತಿನ ಪ್ರಪ್ರಥಮ ಪ್ರಜಾ ತಂತ್ರದ ಪಾರ್ಲಿಮೆಂಟ್ ಅಂದರೆ ಬಸವಣ್ಣ ನವರ ಅನುಭವ ಮಂಟಪ. ಪ್ರಜಾತಂತ್ರದ ಮೊದಲ ಕಹಳೆಯನ್ನು ಮೊಳಗಿಸಿದ ಮಹಾ ಪುರುಷ ಬಸವಣ್ಣನವರು. ಪರಮಪೂಜ್ಯ ಶ್ರೀಶ್ರೀಗಳವರು ಮಹಾಸಂತರು; ಒಬ್ಬ ಸಾಮಾಜಿಕ ಹರಿಕಾರರು. ಇಡೀ ಸಮಾಜದ ನೇತೃತ್ವ ವಹಿಸಿಕೊಂಡು ಮಾರ್ಗದರ್ಶನ ನೀಡುತ್ತಿರುವುದು ಸಮಾಜದ ಪುಣ್ಯ" ಎಂದು ನುಡಿದರು.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಕ್ಯಾಸೆಟ್ ಬಿಡುಗಡೆ

ಅವರು ತಮ್ಮ ಭಾಷಣದಲ್ಲಿ "ರಾಜ್ಯದ ವೀರಶೈವ ಮಠಗಳಲ್ಲಿ ತನ್ನೇ ಆದ ಛಾಪನ್ನು ಮೂಡಿಸಿರುವ ಸಿದ್ಧಗಂಗಾ ಮಠ ಕಳೆದ ೭೦ ವರ್ಷಗಳಿಂದ ತ್ರಿವಿಧ ದಾಸೋಹಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡುತ್ತಾ ಬಂದಿದೆ. ಪರಮಪೂಜ್ಯ ಶ್ರೀಗಳು ಶಿಕ್ಷಣಕ್ಷೇತ್ರದಲ್ಲಿ ಮೌನಕ್ರಾಂತಿಯನ್ನೇ ಮಾಡಿದ್ದಾರೆ. ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೆ ಕಾಲೇಜು ಗಳನ್ನು ತೆರೆದು ಲಕ್ಷಾಂತರ ಮನೆಗಳಿಗೆ-ಮನಗಳಿಗೆ ಅರಿವಿನ ಜ್ಯೋತಿಯನ್ನು ಬೆಳಗಿಸುತ್ತಿದ್ದಾರೆ" ಎಂದರು.

ಪ್ರಧಾನಿ ಶ್ರೀ ವಾಜಪೇಯಿಯವರು ಪರಮಪೂಜ್ಯ ಶ್ರೀಶ್ರೀಗಳವರ ಬಗ್ಗೆ ಅಪಾರ ಭಕ್ತಿ, ಗೌರವನ್ನು ಇಟ್ಟುಕೊಂಡಿದ್ದಾರೆ. ಪರಮಪೂಜ್ಯ ಶ್ರೀಶ್ರೀಗಳವರು ಒಂದು ನೂರು ವರ್ಷಗಳನ್ನು ಕಾಣುವ ಸೌಭಾಗ್ಯ ದೊರೆಯಲಿ ಎಂದು ಶುಭ ಕೋರಿದ್ದಾರೆ. ಅವರ ಶುಭಾಶಯಗಳನ್ನು ಪೂಜ್ಯ ಶ್ರೀಶ್ರೀಗಳವರ ಚರಣಗಳಿಗೆ ಅರ್ಪಿಸುತ್ತಿದ್ದೇನೆ ಎಂದು ಈ ಸಂದರ್ಭದಲ್ಲಿ ತಿಳಿಸಿದರು.

**ನೂತನ ಅತಿಥಿ ಗೃಹದ ಉದ್ಘಾಟನೆ**



ಕೇಂದ್ರ ಸಚಿವ ಶ್ರೀ ಅನಂತಕುಮಾರ್ ಅವರಿಂದ ಭಾಷಣ.

ರಾಜ್ಯ ಗೃಹ ಸಚಿವ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು ಶ್ರೀ ಮಠದಲ್ಲಿ ನಿರ್ಮಿಸಿರುವ ನೂತನ ಅತಿಥಿ ಗೃಹ ಕಟ್ಟಡವನ್ನು ಉದ್ಘಾಟಿಸಿ ಮಾತ ನಾಡುತ್ತಾ "ಕಳೆದ ಅನೇಕ ದಶಕಗಳಿಂದ ಶ್ರೀಶ್ರೀಗಳವರು ಸಾಮಾಜಿಕ ಹಾಗೂ ಶಿಕ್ಷಣ ಕ್ರಾಂತಿಯನ್ನು ಮಾಡುತ್ತಿದ್ದಾರೆ. ಧರ್ಮ ಮತ್ತು ಸಂಸ್ಕೃತಿಗಳಿರುವುದು ಮಾನವನ ಉದ್ಧಾರಕ್ಕೆ. ಆದ್ದರಿಂದ ಧರ್ಮ ಸಂಸ್ಕೃತಿಯ ಮೂಲಕ ಜನರನ್ನು ಉತ್ತಮ ನಾಗರಿಕರನ್ನಾಗಿ ಮಾಡಲು ಮಠಮಾನ್ಯ ಗಳಿಗೆ ಮಾತ್ರ ಸಾಧ್ಯ' ಎಂದು ಅಭಿಪ್ರಾಯ ಪಟ್ಟ ಶ್ರೀ ಖರ್ಗೆಯವರು "ಧರ್ಮದ ಹೆಸರಿನಲ್ಲಿ ನಮ್ಮ ದೇಶದ ಸುತ್ತಮುತ್ತಲ ದೇಶಗಳು ಬಲಿಷ್ಠವಾಗುತ್ತಿರು







ಸಂಜೆ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಆಶೀರ್ವಚನ

ವಾಗ ನಮ್ಮ ದೇಶ, ಜಾತಿ, ಉಪಜಾತಿಗಳ ಕಲಹದಿಂದ ಅಭದ್ರತೆಯತ್ತ ಸಾಗುತ್ತಿದೆ. ಇಂತಹ ಸಂದರ್ಭದಲ್ಲಿ ಸಾಮಾಜಿಕ ಅಸಮಾನತೆಯನ್ನು ನಿವಾರಿಸಿ ಭಾರತದೇಶ ಹಿಂದೂ ರಾಷ್ಟ್ರ ಎಂಬ ಪರಿಕಲ್ಪನೆಯನ್ನು ಸಮಾಜಕ್ಕೆ ಅರಿವನ್ನುಂಟು ಮಾಡುವ ಬಗ್ಗೆ ಸಿದ್ಧಗಂಗಾ ಶ್ರೀಶ್ರೀಗಳವರಂತ ಮಹಾಪುರುಷರು ಸಂಕಲ್ಪ ಮಾಡಬೇಕೆಂದು" ಮನವಿ ಮಾಡಿಕೊಂಡ ಸಚಿವರು "ರಾಜಕಾರಣಿಗಳು ಅಧಿಕಾರದ ವಿಫಲತೆಯನ್ನುಂಟು ಮಾಡುತ್ತಾರೆ" ಎಂದು ತಿಳಿಸಿದರು.



ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿಸತೀಶ್ ಅವರಿಂದ ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ

"ಪರಮ ಪೂಜ್ಯ ಶ್ರೀಶ್ರೀಗಳವರು ೧೨೦ ವರ್ಷಗಳ ಕಾಲ ಬದುಕುತ್ತಾರೆ, ಬದುಕಬೇಕು. ಇತ್ತೀಚೆಗೆ ತುಮಕೂರಿನಲ್ಲಿ ೩ ಕಿ.ಮೀ. ನಡೆದಾಡಿ ಗುಜರಾತ್ ಭೂಕಂಪ ಸಂತ್ರಸ್ಥರ ನಿಧಿಗೆ ದೇಣಿಗೆ ಸಂಗ್ರಹಿಸಿದ್ದಾರೆ. ಅಂದರೆ ಅವರ ಮಾನಸಿಕ ಸ್ಥೈರ್ಯ, ಮಾನವೀಯತೆ, ಅನುಕಂಪ, ದೃಢ ಸಂಕಲ್ಪ ಎಂತಹದು ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ" ಎಂದು ನುಡಿದರು.

ಸಂಸತ್ ಸದಸ್ಯ ಶ್ರೀ ಜಿ.ಎಸ್. ಬಸವರಾಜು ಅವರು "ಪರಮ ಪೂಜ್ಯ ಶ್ರೀಶ್ರೀಗಳವರು ಬಡವರ ಮತ್ತು ಗ್ರಾಮೀಣ ಜನತೆಯ ಮೇಲೆ ಇಟ್ಟಿರುವ ಪ್ರೀತಿ, ವಾತ್ಸಲ್ಯ, ಕರುಣೆ, ಅನುಕಂಪ ಅನುಕರಣೀಯ. ಯಾರಲ್ಲಿಯೂ ಇಂತಹ ಉದಾತ್ತ ಗುಣವನ್ನು



ಡಾ

ಕಾಣಲು ಸಾಧ್ಯವಾಗುತ್ತಿಲ್ಲ ಎಂದು ಭಾವುಕರಾಗಿ ನುಡಿದರು. ಅವರು ಈ ಸಂದರ್ಭದಲ್ಲಿ ತುಮಕೂರಿನಲ್ಲಿ ನಡೆಯಲಿರುವ ಗುರುವಂದನಾ ಕಾರ್ಯ ಕ್ರಮದ ರೂಪುರೇಷೆಗಳನ್ನು ಪರಿಚಯ ಮಾಡಿಕೊಟ್ಟರು. ಸರ್ಕಾರದಿಂದ ಸಾಧ್ಯವಾಗದಂತಹ ಕೆಲಸವನ್ನು ಪರಮಪೂಜ್ಯ ಶ್ರೀಶ್ರೀಗಳವರು ಮಾಡುತ್ತಿದ್ದಾರೆ ಎಂದು ಅಭಿಮಾನದಿಂದ ನುಡಿದರು.

## ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ

ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಸಚಿವರಾದ ಶ್ರೀಮತಿ ರಾಣಿ ಸತೀಶ್ ಅವರು ಸಿದ್ಧಗಂಗಾ ಮಾಸಪತ್ರಿಕೆ ಬಳಗ ಹೊರತಂದ ಪರಮಪೂಜ್ಯ ಶ್ರೀಶ್ರೀಗಳವರ ಮಾನವೀಯ ಮೌಲ್ಯಗಳನ್ನು ಕುರಿತ "ಸಿದ್ಧಗಂಗಾ" ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿ ಮಾತನಾಡಿ "ಉತ್ತಮ ಸಮಾಜದ ನಿರ್ಮಾಣವಾಗಬೇಕು, ಅದು ನಿಜವಾಗಿ ನಾವು ಶ್ರೀಶ್ರೀಗಳವರಿಗೆ ಕೊಡುವ ಬಹು ದೊಡ್ಡ ಕಾಣಿಕೆ ಎಂದರಲ್ಲದೆ, ಪರಮಪೂಜ್ಯ ಶ್ರೀಶ್ರೀಗಳವರು ಸಮಾಜದ ಸಂಪತ್ತಾಗಿದ್ದಾರೆ. ಅವರ ದರ್ಶನ ಮಾಡುವುದೇ ನಮ್ಮ ಪೂರ್ವಜನ್ಮದ ಪುಣ್ಯ" ಎಂದರು.

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಾದ ಡಾ॥ ಎ.ಬಿ. ಮಲಕರೆಡ್ಡಿ ಅವರು "ಶ್ರೀಶ್ರೀಗಳವರು ತಮ್ಮ ಜೀವನ ವನ್ನು ಬಡವರ ಸೇವೆಗಾಗಿ, ಉದ್ಧಾರಕ್ಕಾಗಿ ಸವೆಸುತ್ತಿದ್ದಾರೆ. ಅವರು ಮಾಡುವ ಸೇವೆ ಸಮಾಜಕ್ಕೆ ವಿನಿಯೋಗವಾಗುತ್ತಿದೆ. ಬಸವಣ್ಣ ನವರ ಆದರ್ಶಗಳು



ಮೈತ್ರಿ ಕಲಾವಿದೆಯರಿಂದ ವೀರಗಾಸೆ ನೃತ್ಯ





ಜೀವನ ಸಿದ್ಧಾಂತಗಳನ್ನು ಅನುಷ್ಠಾನಗೊಳಿಸುತ್ತಿದ್ದಾರೆ" ಎಂದರು.

ಸಂಸತ್ ಸದಸ್ಯ ಶ್ರೀ ಜಿ. ಪುಟ್ಟಸ್ವಾಮಿಗೌಡ ಅವರು ಹೃದಯ ತುಂಬಿ ಮಾತನಾಡುತ್ತಾ "ಸ್ವಾಮೀಜಿಯವರನ್ನು ಕುರಿತು ಮಾತನಾಡುವಾಗ ನನ್ನಲ್ಲಿ ಕನ್ನಡ ಶಬ್ದಗಳಿಲ್ಲ. ಅಂತಹ ಮಹಾಪುರುಷ ಪೂಜ್ಯ ಶ್ರೀಶ್ರೀಗಳವರು" ಎಂದರು.

ಕೃಷಿ ಸಚಿವ ಶ್ರೀ ಟಿ.ಬಿ. ಜಯಚಂದ್ರ ಅವರು "ಪರಮಪೂಜ್ಯ ಶ್ರೀಶ್ರೀಗಳು ಸಮಾಜದ ಸಂಪತ್ತು' ಎಂದು ಬಣ್ಣಿಸಿದರು.

## ಗಣ್ಯರಿಗೆ ಸನ್ಮಾನ

ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್‌ನ ನಿರ್ದೇಶಕ ಶ್ರೀ ಗೋಪಾಲ್ ಶ್ರೀನಿವಾಸನ್, ಹಂಪೆ ಕನ್ನಡ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿ ಡಾ॥ ಎಂ.ಎಂ. ಕಲಬುರ್ಗಿ, ಬೆಂಗಳೂರು ರಾಜಪುರೋಹಿತ ಸಮಾಜದ ಅಧ್ಯಕ್ಷ ಶ್ರೀ ಬಲವಂತ ಸಿಂಹ ಹಾಗೂ ಸಮಾಜ ಸೇವಕ ರಘುವನಹಳ್ಳಿ ಯಜಮಾನ್ ಶ್ರೀ ಚಿಕ್ಕವೀರಪ್ಪ ಅವರುಗಳನ್ನು ಪರಮಪೂಜ್ಯ ಡಾ॥ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳು ಶಾಲು ಹೊದಿಸಿ ಫಲತಾಂಬೂಲ ಹಾಗೂ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು.

ಸನ್ಮಾನಿತರ ಪರವಾಗಿ ಶ್ರೀ ಗೋಪಾಲ್ ಶ್ರೀನಿವಾಸನ್ ಹಾಗೂ ಡಾ॥ ಎಂ.ಎಂ. ಕಲಬುರ್ಗಿ ಅವರು ಮಾತನಾಡಿದರು.

ವೇದಿಕೆಯಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ದಾಕ್ಷಾಯಣಿ ಅಶ್ವಥ್, ಶಾಸಕರಾದ ಶ್ರೀ ಎಸ್. ಶಿವಣ್ಣ ಶ್ರೀ ಎಚ್.ಎಂ. ರೇವಣ್ಣ, ಶ್ರೀ ಎಸ್.ಪಿ. ಮುದ್ದಹನುಮೇಗೌಡ, ಶ್ರೀ ಆರ್. ನಾರಾಯಣ, ಶ್ರೀ ಪಿ. ಚನ್ನಿಗಪ್ಪ, ಶ್ರೀ ಎನ್. ವೀರಣ್ಣಗೌಡ, ಶ್ರೀ ಎಂ.ಡಿ. ಲಕ್ಷ್ಮೀನಾರಾಯಣ, ಶ್ರೀ ಎಸ್. ಚನ್ನಬಸವಯ್ಯ, ಶ್ರೀ ಕೆ.ಎನ್. ರಾಜಣ್ಣ ಎ.ಪಿ.ಎಂ.ಸಿ.ಯ ಅಧ್ಯಕ್ಷ ಶ್ರೀ ಪಂಚಾಕ್ಷರಯ್ಯ ಮತ್ತಿತರರು ಉಪಸ್ಥಿತರಿದ್ದರು.

ಕಾರ್ಯಕ್ರಮಕ್ಕೆ ಮುನ್ನ ನೂರೊಂದು ಕಲಶಗಳನ್ನು ಹೊತ್ತ ಟಿ.ಸಿ.ಎಚ್. ವಿದ್ಯಾರ್ಥಿನಿಯರು - ರಾಷ್ಟ್ರಖ್ಯಾತಿಯ ಶ್ರೀ ಹೆಚ್.ಎಸ್. ನೀಲಕಂಠಯ್ಯ ಹಾಗೂ ಅವರ ಸಂಗಡಿಗರಿಂದ ವೀರಗಾಸೆ ನೃತ್ಯದೊಂದಿಗೆ ಪರಮಪೂಜ್ಯ ಶ್ರೀಶ್ರೀಗಳವರನ್ನು ವೇದಿಕೆಗೆ ಕರೆತರಲಾಯಿತು. ಕಾರ್ಯಕ್ರಮಕ್ಕೆ ಮುನ್ನ ತುಮಕೂರು ಮೈತ್ರಿ ಸಮಾಜದ ಕಲಾವಿದೆಯರು ವೀರಗಾಸೆ ನೃತ್ಯ ಪ್ರದರ್ಶನ ನೀಡಿ ಪ್ರೇಕ್ಷಕರನ್ನು ರಂಜಿಸಿದರು.

ಕಾರ್ಯಕ್ರಮ ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ ಅವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಸಿದ್ದಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪನವರು ಸ್ವಾಗತಿಸಿದರು. ಶ್ರೀ ಮಠದ ಆಡಳಿತಾಧಿಕಾರಿ ಶ್ರೀ ಪಿ.ಎನ್. ಪುಟ್ಟಶಂಕರಯ್ಯ ಅವರು ರಾಜ್ಯಪಾಲ ಶ್ರೀಮತಿ ವಿ.ಎಸ್. ರಮಾದೇವಿ ಅವರು ಹಾಗೂ ಇತರ ಗಣ್ಯರು ಕಳುಹಿಸಿದ್ದ ಸಂದೇಶವನ್ನು ವಾಚಿಸಿದರು. ಸಿದ್ಧಗಂಗಾ ಮಾಸಪತ್ರಿಕೆ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಕಾರ್ಯಕ್ರಮ ನಿರೂಪಿಸಿದರು.

## ಸಾಹಿತ್ಯ ಸಮ್ಮೇಳನ

ಸಂಜೆ ನಡೆದ ಸಾಹಿತ್ಯ ಸಮ್ಮೇಳನ ಶ್ರೀ.ಮ.ನಿ.ಪ್ರ.ಸ್ವ. ಶ್ರೀ ಶ್ರೀ ಗಂಗಾಧರಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ನಡೆಯಿತು. ಸಮ್ಮೇಳನವನ್ನು ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿಸತೀಶ್ ಅವರು ಉದ್ಘಾಟಿಸಿದರು. ಶ್ರೇಷ್ಠ ಸಂಶೋಧಕರಾದ ಡಾ॥ ಎಂ. ಚಿದಾನಂದಮೂರ್ತಿ ಅವರು "**ಆಧುನಿಕ ಜಗತ್ತಿಗೆ ಶರಣ ಸಾಹಿತ್ಯದ ಕೊಡುಗೆ**" ಎಂಬ ವಿಷಯವನ್ನು ಕುರಿತು ಉಪನ್ಯಾಸ ನೀಡಿದರು. ಕನ್ನಡ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿ ಡಾ॥ ಎಂ.ಎಂ. ಕಲಬುರ್ಗಿ ಅವರು ಅಧ್ಯಕ್ಷತೆ ವಹಿಸಿದ್ದರು. ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಆಶೀರ್ವಚನ ನೀಡಿದರು.

ವಿದ್ವಾನ್ ಸಾಯಿನಾಥ ಮತ್ತು ಸಂಗಡಿಗರಿಂದ ಸ್ಯಾಕ್ಸೋಫೋನ್ ಸಂಗೀತ ಕಾರ್ಯಕ್ರಮ ಶ್ರೀಮಠದ ಕಲಾವಿದರಿಂದ ನಾಟಕ ಕಾರ್ಯಕ್ರಮ ನಡೆಯಿತು.

*

## 'ಉದ್ಯಮ ಸದ್ಭಾವಿ'
## ಶ್ರೀ ಗೋಪಾಲ್ ಶ್ರೀನಿವಾಸನ್ ಅವರು



*ನಿರ್ದೇಶಕರು*
*ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್ ಲಿಮಿಟೆಡ್*
*ಹಿರೇಹಳ್ಳಿ, ತುಮಕೂರು*

*ಶ್ರೀ ಕ್ಷೇತ್ರದಲ್ಲಿ ಪ್ರತಿವರ್ಷ ನಡೆಯುವ ಶ್ರೀ ಗುರುವಂದನಾ ಸಮಾರಂಭದ ಸಂದರ್ಭದಲ್ಲಿ ಕಳೆದ ಅನೇಕ ವರ್ಷಗಳಿಂದ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆಸಲ್ಲಿಸಿದ ಗಣ್ಯರನ್ನು ಗೌರವಿಸಲಾಗುತ್ತಿದೆ. ಅದರಂತೆ ಈ ವರ್ಷವೂ ೯೪ನೇ ಗುರುವಂದನಾ ಮಹೋತ್ಸವದಲ್ಲಿ ಶ್ರೀ ಗೋಪಾಲ್ ಶ್ರೀನಿವಾಸನ್, ಡಾ॥ ಎಂ.ಎಂ. ಕಲಬುರ್ಗಿ, ಶ್ರೀ ಬಲವಂತ ಸಿಂಹ ಹಾಗೂ ಯಜಮಾನ್ ಶ್ರೀ ಚಿಕ್ಕವೀರಪ್ಪ ಅವರನ್ನು ಪರಮಪೂಜ್ಯ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಮ್ಮುಖದಲ್ಲಿ ಫಲತಾಂಬೂಲನೀಡಿ ಶಾಲು ಹೊದಿಸಿ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಈ ನಾಲ್ಕು ಜನ ಮಹನೀಯರ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.*

**ಟಿ.ವಿ.ಎಸ್.** ರಾಷ್ಟ್ರದ ಕೈಗಾರಿಕಾ ಕ್ಷೇತ್ರದಲ್ಲಿ ಒಂದು ಪ್ರಮುಖ ಹೆಸರು. ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಅದರ ಖ್ಯಾತಿವ್ಯಾಪಕ. ರಾಷ್ಟ್ರ ನಿರ್ಮಾಣದಲ್ಲಿ ತನ್ನ ಸೇವೆಯನ್ನು ಸದ್ದಿಲ್ಲದೆ ಸಲ್ಲಿಸುತ್ತಿರುವ ಅಭಿಮಾನೀ ಸಂಸ್ಥೆ. ಆ ಸಂಸ್ಥೆಯ ಅವಿಭಾಜ್ಯ ಅಂಗವಾಗಿರುವ ಶ್ರೀ ಗೋಪಾಲ್ ಶ್ರೀನಿವಾಸನ್ ಅವರು ಹುಟ್ಟಿದ್ದು ೪.೮.೧೯೫೮ರಂದು. ತಂದೆ ದಿವಂಗತ ಟಿ.ಎಸ್. ಶ್ರೀನಿವಾಸನ್, ತಾತ ದಿವಂಗತ ಟಿ.ವಿ. ಸುಂದರಂ ಐಯ್ಯಂಗಾರ್ ಅವರು. ಶ್ರೀ ಗೋಪಾಲ್ ಶ್ರೀನಿವಾಸನ್ ಅವರು ಯು. ಎಸ್. ಎ ದ ಆನ್ ಆರ್ಬರ್‌ನ ಮಿಚಿಗನ್ ವಿಶ್ವವಿದ್ಯಾಲಯದ ಲೊಯೋಲಾ ಕಾಲೇಜಿನಿಂದ ವಾಣಿಜ್ಯ ಪದವಿ ಮತ್ತು ಎಂ.ಬಿ.ಎ. ಪದವಿ ಪಡೆದಿರುವ ಸ್ನಾತಕ ಸಂಪನ್ನರು.

ಶ್ರೀಯುತರು ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್‌ನ ನಿರ್ದೇಶಕರಾಗಿ, ಸುಂದರಂ ಕ್ಲೇಟನ್ ಲಿಮಿಟೆಡ್‌ನ ಜಂಟಿ ವ್ಯವಸ್ಥಾಪಕ ನಿರ್ದೇಶಕರಾಗಿ, ಹಾಗೂ ಟಿ.ವಿ.ಎಸ್., ಇತರೆ ಸಮೂಹ ಕಂಪನಿಗಳ ನಿರ್ದೇಶಕರಾಗಿ ಮತ್ತು ಹರಿತಾ ಆರ್ಥಿಕ ಸಂಸ್ಥೆಯ ಅಧ್ಯಕ್ಷರಾಗಿ ಸೇವಾನಿರತರಾಗಿದ್ದಾರೆ.

ಶ್ರೀಯುತರು ಮಾಹಿತಿ ತಂತ್ರಜ್ಞಾನ ನಿರ್ಮಾಪಕರ ಸಂಘದ ಅಧ್ಯಕ್ಷರಾಗಿ ಹಾಗೂ ಮಾಹಿತಿ ತಂತ್ರಜ್ಞಾನದ ಪ್ರತಿನಿಧಿಗಳಾಗಿ ಭಾರತ ಸರ್ಕಾರದೊಡನೆ ಸೇವೆ ಸಲ್ಲಿಸಿದ್ದಾರೆ. ಮಾಹಿತಿ ತಂತ್ರಜ್ಞಾನದ ರಾಷ್ಟ್ರೀಯ ಯಂತ್ರಾಂಶದ ಉತ್ಪಾದನೆ ಮತ್ತು ರಫ್ತಿನ ಕಾರ್ಯದಳದ ಸದಸ್ಯರಾಗಿ, ಪ್ರಧಾನಮಂತ್ರಿಗಳ ತಂತ್ರಾಂಶ ಅಭಿವೃದ್ಧಿ ಪ್ರಾಧಿಕಾರದ ಸದಸ್ಯರಾಗಿ, ತಮಿಳುನಾಡಿನ ಮುಖ್ಯಮಂತ್ರಿಗಳ ನೇತೃತ್ವದ ರಾಜ್ಯಮಟ್ಟದ ತಂತ್ರಜ್ಞಾನ ಅಭಿವೃದ್ಧಿ ಕಾರ್ಯದಳದ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಗೌರವದ ಮತ್ತೊಂದು ಗರಿ ಎಂಬಂತೆ ಶ್ರೀಯುತರು ಭಾರತ ಸರ್ಕಾರದ ವಾಣಿಜ್ಯಮತ್ತು ಕೈಗಾರಿಕೆ ಇಲಾಖೆಯ ವತಿಯಿಂದ ಸ್ಥಾಪಿತವಾದ ವಿದ್ಯುನ್ಮಾನ ಯಂತ್ರಾಂಶದ ರಫ್ತಿನ ಪ್ರಮಾಣ ಹೆಚ್ಚಳದ ಸಣ್ಣ ಗುಂಪಿನ ನೀತಿ ನಿಯಮಗಳ ಸಲಹಾ ಸದಸ್ಯರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.





ಶ್ರೀ ಗೋಪಾಲನ್ ಶ್ರೀನಿವಾಸನ್ ಅವರು ಉದಾತ್ತ ಗುಣ ಸಮುದ್ರರು, ದೈವಭಕ್ತರು. ಮಾನವೀಯತೆಯ ಆರಾಧಕರು. ಕೊಡುಗೈದಾನಿಗಳು. *'ಮಾಡಿದೆನೆಂಬುದು ಮನದಲ್ಲಿ ಹೊಳೆಯದ'* ನಿರಹಂಕಾರಿಗಳು. ಶ್ರೀಯುತರು ಶ್ರೀಮಠದಲ್ಲಿ ಆಶ್ರಯಪಡೆದಿರುವ ೭೫ ಬಡ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಖರ್ಚುವೆಚ್ಚಗಳನ್ನು ಭರಿಸುತ್ತಿದ್ದಾರೆಂಬುದನ್ನು ಈ ಸಂದರ್ಭದಲ್ಲಿ ಸ್ಮರಿಸಲು ಸಂತೋಷವಾಗುತ್ತದೆ. ಉದಾರವಾಗಿ ಹಲವಾರು ಸಂಸ್ಥೆಗಳಿಗೆ ಸಹಾಯ ನೀಡಿದ್ದಾರೆಂಬುದು ಸಂತೋಷಕರ.

ಸುಸಂಸ್ಕೃತ ಕ್ರಿಯಾಶೀಲ ಹಿನ್ನೆಲೆಯುಳ್ಳ ಮನೆತನದಿಂದ ಬಂದಿರುವ ಶ್ರೀ ಗೋಪಾಲ್ ಶ್ರೀನಿವಾಸನ್ ಅವರು ಇಡೀ ಟಿ.ವಿ.ಎಸ್. ಬಳಗಕ್ಕೆ ಅಮೂಲ್ಯ ನಿಧಿಯಾಗಿರುವಂತೆ, ರಾಷ್ಟ್ರಕ್ಕೆ ಬಹು ದೊಡ್ಡ ಕೊಡುಗೆಯಾಗಿದ್ದಾರೆ. ಶ್ರೀಯುತರು ಕೀರ್ತಿಕಾಮಿಗಳಲ್ಲ. ರಾಷ್ಟ್ರ ನಿರ್ಮಾಣದಲ್ಲಿ ನಿರತರಾಗಿರುವ ಉದ್ಯಮ ಸೇನಾಪತಿಗಳು. ವಿನಯಕ್ಕೆ, ಸೌಜನ್ಯಕ್ಕೆ, ಕರ್ತವ್ಯಪಾಲನೆಗೆ, ದಕ್ಷತೆಗೆ ಮತ್ತೊಂದು ಹೆಸರಾದ ಶ್ರೀ ಗೋಪಾಲ್ ಶ್ರೀನಿವಾಸನ್ ಅವರು ಶ್ರೀಮಠದೊಡನೆ ಬೆಳೆಸಿಕೊಂಡಿರುವ ಬಾಂಧವ್ಯ ಮಧುರವಾದುದು, ಮುಂಬೆಳಗಿನ ಬಿಸಿಲಿನಂತಹುದು. ಕಾಯಕ ಪ್ರೇಮಿಗಳಾದ ಗುರುಜನರಲ್ಲಿ ಭಕ್ತಿ ಭಾವವುಳ್ಳ, ದೇವರು, ಧರ್ಮ, ಮಠಮಾನ್ಯಗಳ ಬಗ್ಗೆ ಸದ್ಭಾವ ಭರಿತರಾಗಿರುವ, ಮಾಡುವ ಕರ್ತವ್ಯದಲ್ಲಿಯೇ ಮಹಾದೇವನನ್ನು ಕಾಣುವ ಪ್ರವೃತ್ತಿ ಪುಣ್ಯಜೀವಿಗಳಾದ ಸನ್ಮಾನ್ಯ ಶ್ರೀ ಗೋಪಾಲ್ ಶ್ರೀನಿವಾಸನ್ ಅವರನ್ನು *'ಉದ್ಯಮ ಸದ್ಭಾವಿ'*ಗಳೆಂದು ಗೌರವಿಸಿ, ಸನ್ಮಾಯಿಸಲಾಯಿತು. ❄

---

## 'ಮಹಾಮಾರ್ಗದ ತಪಸ್ವಿ'
## ಡಾ ॥ ಎಂ.ಎಂ. ಕಲಬುರ್ಗಿ ಅವರು



*ಮಾಜಿ ಉಪಕುಲಪತಿಗಳು,*
*ಕನ್ನಡ ವಿಶ್ವವಿದ್ಯಾನಿಲಯ, ಹಂಪಿ*

*"ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ"* ಎಂದು ಹೇಳುತ್ತಾರೆ ಬಸವಣ್ಣನವರು. ನಿಜವಾದ ಸಂಶೋಧಕನಿಗೆ ಈ ಮಾತು ಮಾರ್ಗದರ್ಶಿಯಾಗಿದೆ. ಅಂದರೆ, ಆತ ಸತ್ಯಕ್ಕೆ ಕೇಡು ತಟ್ಟದಂತೆ, ತನ್ನ ಸ್ವಾತಂತ್ರ್ಯಕ್ಕೆ ಭಂಗಬರದಂತೆ ಸಂಶೋಧನ ವ್ರತವನ್ನು ಮುಂದುವರಿಸಬೇಕು. ಗತಿಸಿದ ಪರಂಪರೆಯ ಪ್ರಕಟನೆಯ ಹೊರೆ ತನ್ನ ಮೇಲಿದೆ ಎಂಬ ಎಚ್ಚರ ಮನೆಮಾಡಿರಬೇಕು. ಪರಂಪರೆಯನ್ನು ವ್ಯತ್ಯಸ್ತಗೊಳಿಸುವ, ಮುಚ್ಚಿಹಾಕುವ ಪಾಪಕಾರ್ಯ ಅವನ ಕೈಯಿಂದ ಜರುಗ ಬಾರದು. ಆದುದರಿಂದ, ಆತ ಆಕರ ಸಾಮಗ್ರಿಯನ್ನು ಅವಲಂಬಿಸಿ ಸತ್ಯವನ್ನು, ಅದು ಸಾಧ್ಯವಾಗದಿದ್ದರೆ, ಸಂಭಾವ್ಯತೆ ಯನ್ನು ಸ್ಥಾಪಿಸಬೇಕಾಗುತ್ತದೆ. ಮುಂದಿನವರು ಈ ಸಂಭಾವ್ಯತೆ ಯನ್ನು ಹೊಸ ಆಕರಗಳಿಂದ ಸತ್ಯಗೊಳಿಸಬಹುದಾಗಿದೆ. ಅದಕ್ಕಾಗಿಯೇ *"ಸಂಶೋಧನೆ ಯೆನ್ನುವುದು ಅಲ್ಪ ವಿರಾಮ, ಅರ್ಧ ವಿರಾಮಗಳ ಮೂಲಕ ಪೂರ್ಣ ವಿರಾಮದೆಡೆಗೆ ಸಾಗುವ ಕ್ರಿಯೆಯಾಗಿದೆ"* – ಎನ್ನುವ ಸಂಶೋಧನ ವೀರರಾದ ಡಾ ॥ ಎಂ.ಎಂ. ಕಲಬುರ್ಗಿಯವರು ವಿಜಾಪುರಜಿಲ್ಲೆ ಸಿಂಧಗಿ ತಾಲ್ಲೂಕಿನ ಗುಬ್ಬೇವಾಡ ಗ್ರಾಮದ ಶ್ರೀಮಡಿವಾಳಪ್ಪ ಮತ್ತು ಶ್ರೀಮತಿ ಗುರಮ್ಮನವರ ಸುಪುತ್ರರಾಗಿ ದಿನಾಂಕ ೨೮.೧೧.೧೯೩೮ರಂದು ಜನ್ಮತಾಳಿದವರು. ಹೆತ್ತವರ ಮಂಡೆಗೆ ಹೂವು ತಂದವರು; ಹೊತ್ತವರು, ಹೊರೆದವರು

ಒಪ್ಪುವಂತೆ ಒಗೆತನವ ಮಾಡಿದವರು. *''ಕೆಂಡದಮಳೆ ಕರೆವಲ್ಲಿ ಉದಕವಾಗ ಬೇಕೆಂಬುದಕ್ಕೆ''* ಭಾಷ್ಯವಾದವರು.

ಹಳ್ಳಿಯ ಮಧ್ಯಮ ವರ್ಗದಲ್ಲಿ ಹುಟ್ಟಿದ ಶ್ರೀಮಲ್ಲಿನಾಥ ಕಲಬುರ್ಗಿ ಅವರು ತಮ್ಮ ತಂದೆಯವರಿಂದ 'ಶ್ರಮ'ವನ್ನು ಅರ್ಥಪೂರ್ಣ ಜೀವನ ಮೌಲ್ಯವನ್ನಾಗಿ ಆರೂಢಿಸಿಕೊಂಡವರು. ಶ್ರಮಮೌಲ್ಯದ ಆರಾಧಕರಾಗಿ ಅನುಷ್ಠಾನನಿಷ್ಠರಾಗಿ ಅರಳಿದವರು. ತಮ್ಮ ಗುರುಗಳಾದ ಶ್ರೀ ಬಿ.ಟಿ. ಸಾಸನೂರ ಮತ್ತು ಡಾ ॥ ಆರ್.ಸಿ. ಹಿರೇಮಠರ ನೆರಳಿನಲ್ಲಿ ದೃಢವಾದ ಹೆಜ್ಜೆಯಿಟ್ಟವರು. *''ದುಡಿಯುವವನ ಮನಸ್ಸು ಆರೋಗ್ಯಶಾಲಿಯಾಗಿರುತ್ತದೆ''* ಎಂಬ ಡಾ ॥ ಫ.ಗು. ಹಳಕಟ್ಟಿಯವರ ನುಡಿಯ ಪರಿಣಾಮದ ಪುಷ್ಪವಾದವರು. *''ಜನಮೆಚ್ಚಿನಡೆಕಹೊಂಡರೇನುಂಟು ಲೋಕದಿ ಮನಮೆಚ್ಚಿನಡೆ ಕೊಂಬುದೇ ಚೆಂದವು''* ಎಂದು ಮುನ್ನಡೆದು ಮಹಾಮಾರ್ಗ ಕ್ರಮಿಸಿದ ಕ್ರಿಯಾಶೀಲ ವಿದ್ವನ್ಮಣಿಗಳು.

*''ಭಾರತದಂಥ ಭಾವನಿಷ್ಠ ರಾಷ್ಟ್ರದಲ್ಲಿ ಸಂಶೋಧನೆ ಸರಳ ದಾರಿಯಲ್ಲ, ಕಹಿಸತ್ಯ ಹೇಳಬಾರದು''* ಎಂಬ ಸಂಪ್ರದಾಯದ ವಾರಸುದಾರರಾದ ಭಾರತೀಯರಿಗೆ ಅಂಥ ಸತ್ಯ ಸಹಜವಾಗಿಯೇ ಸಿಹಿ ಎನಿಸುವುದಿಲ್ಲ. ಹೀಗಾಗಿ ಈ ರಾಷ್ಟ್ರದಲ್ಲಿ ಸಂಶೋಧಕ ಆಗಾಗ ಸಣ್ಣ ಸಣ್ಣ ಶಿಲುಬೆಗಳನ್ನೇರಬೇಕಾಗುತ್ತದೆ. 'ಮುಗ್ಧ'ರೊಂದಿಗೆ 'ಜಾಣ'ರೂ ಕೆಲವೊಮ್ಮೆ ಕೈಗೂಡಿಸಿ ಸಂಶೋಧಕನನ್ನು ಅಂದರೆ ಸತ್ಯವನ್ನು ಹಿಂಸಿಸುವಲ್ಲಿ ತೃಪ್ತಿಪಡುತ್ತಾರೆ. ಇಂಥ ಪ್ರಸಂಗಗಳಿಂದಾಗಿ ಭಾರತೀಯ ಸಂಶೋಧಕ ಅನೇಕ ಅಗ್ನಿಕುಂಡಗಳನ್ನು ದಾಟಬೇಕಾಗುತ್ತದೆ. 'ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಬಹುಶಃ ನನ್ನ ತಲೆಮಾರಿನ ಇತರ ಸಂಶೋಧಕರಿಗಿಂತ ಪರಿಸರವು ನನ್ನ ಕಾಲಕೆಳಗೆ ತೋಡಿದ ಅಗ್ನಿಕುಂಡಗಳೇ ದೊಡ್ಡವೆಂದು ತೋರುತ್ತದೆ. ಆದರೆ ಕಾಲಕೆಳಗಿನ ಬೆಂಕಿಗಿಂತ ಕಣ್ಣುಮುಂದಿನ ಬೆಳಕು ದೊಡ್ಡದೆಂಬ ನಂಬಿಕೆ ನನ್ನನ್ನು ಈವರೆಗೆ ಉಳಿಸಿದೆ ಬೆಳೆಸಿದೆಯೆಂದು ನಂಬಿದ್ದೇನೆ' ಎಂಬ ಆತ್ಮವಿಶ್ವಾಸದ, ಸತ್ಯನಿಷ್ಠುರ ಪ್ರಿಯರಾದ ಡಾ ॥ ಕುಲಬುರ್ಗಿಯವರು *'ಕುಟುಂಬ ಪ್ರಧಾನ ಸಂಸ್ಕೃತಿಯ, ಸಮಷ್ಟಿ ಸಂಸ್ಕೃತಿಯ, ಜನಪದ ಸಂಸ್ಕೃತಿಯ'* ಪರಿಸರದಿಂದ ಬಂದ ಗಂಧಪರಿಮಳವಾಗಿದ್ದಾರೆ.

೧೯೬೦ರಲ್ಲಿ ಬಿ.ಎ., ೧೯೬೨ರಲ್ಲಿ ಎಂ.ಎ. ಪ್ರಥಮದರ್ಜೆ ಪ್ರಶಸ್ತಿ ಸಹಿತ ಪದವಿಗಳಿಸಿದ ಶ್ರೀಯತರು; ೧೯೬೮ರಲ್ಲಿ ಪಿ.ಎಚ್‌ಡಿ ಪದವೀಧರರಾದರು. ೧೯೬೨ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಸಹಾಯಕ ಸಂಶೋಧಕರಾಗಿ ವೃತ್ತಿಜೀವನಾರಂಭಮಾಡಿ ಅಧ್ಯಾಪಕ, ಪ್ರವಾಚಕ, ಪ್ರಾಧ್ಯಾಪಕ, ಕನ್ನಡ ಅಧ್ಯಯನ ಪೀಠದ ಮುಖ್ಯಸ್ಥ, ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕ, ಸಿಂಡಿಕೇಟ್ ಸದಸ್ಯ, ಶ್ರೀ ಬಸವೇಶ್ವರ ಪೀಠದ ಅಧ್ಯಕ್ಷರಾಗಿ ಸೇವೆಸಲ್ಲಿಸಿ, ನಿವೃತ್ತಿಯನಂತರ ೧೯೯೮ರಿಂದ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಆ ವಿಶ್ವವಿದ್ಯಾಲಯದ ಸುವರ್ಣಕಾಲವನ್ನಾಗಿಸಿದ ಧೀಮಂತ ಚೇತನರು. ಕುಲಪತಿಗಳಾಗಿ ಕಾರ್ಯಭಾರವನ್ನು ವಹಿಸಿಕೊಂಡ ಸಂದರ್ಭದಲ್ಲಿ ಅದರ ಮೇಲೆ ಎರಡು ಕೋಟಿ ರೂ.ಗಳ ಸಾಲದ ಹೊರೆ ಹೊತ್ತು, ಆಡಳಿತ ಕುಸಿದು ಹೋಗಿತ್ತು. ಸಿಬ್ಬಂದಿಯ ಸಂಬಳದ ಭಾರವಿತ್ತು. ಆಂತರಿಕ ಅತೃಪ್ತಿ ಹೆಡೆಯಾಡಿಸಿತ್ತು. ಇದೆಲ್ಲವನ್ನು ಕೇವಲ ಒಂದು ವರ್ಷದೊಳಗಾಗಿ ಸುಧಾರಿಸಿ ವಿಶ್ವವಿದ್ಯಾಲಯವನ್ನು ಚಲನಶೀಲವಾಗಿಸಿದರು. ಕರ್ನಾಟಕ ಸರ್ಕಾರದ ಅನುದಾನವಲ್ಲದೆ ಬೇರೆ ಬೇರೆ ಮೂಲಗಳಿಂದ ಮೂರು ವರ್ಷಗಳ ಅವಧಿಯಲ್ಲಿ ೫ ಕೋಟಿ ೧೦ ಲಕ್ಷ ರೂ.ಗಳನ್ನು ಸಂಗ್ರಹಿಸಿ ಸಂಸ್ಥೆಗೆ ಆರ್ಥಿಕ ಭದ್ರತೆಯನ್ನೊದಗಿಸಿದ ದಕ್ಷರೆನಿಸಿದರು. ತಮ್ಮ ಸೇವಾವಧಿಯಲ್ಲಿ ಒಟ್ಟು ೩೦೦ ಪುಸ್ತಕಗಳನ್ನು ಪ್ರಕಟಿಸಿದ ನಿಸ್ಸೀಮ ಸಾಹಸವನ್ನು ದಾಖಲೆಗೊಳಿಸಿದರು. ಸ್ಥಾವರವಾಗುತ್ತಿದ್ದ ವಿಶ್ವವಿದ್ಯಾಲಯವನ್ನು ಜಂಗಮಶೀಲವನ್ನಾಗಿಸಿದ ಮೇಧಾವಿಗಳೆನಿಸಿದರು. ಕರ್ನಾಟಕ ವಿಶ್ವವಿದ್ಯಾಲಯದ ರೂವಾರಿಯೆನಿಸಿದ್ದ ಡಾ ॥ ಡಿ.ಸಿ. ಪಾವಟೆಯವರ ಆಡಳಿತ ಶೈಲಿಯನ್ನು ಮುಂದುವರಿಸಿದ ಸಮರ್ಥ ಕುಲಪತಿಗಳೆನಿಸಿದರು.

ಡಾ ॥ ಕಲಬುರ್ಗಿಯವರು 'ಸತ್ಯಶೋಧನೆ'ಗೆ ಮತ್ತೊಂದು ಹೆಸರು. ಸಂಶೋಧಕರ ಮಿತ್ರ, ಚೈತನ್ಯ ಸಂಶೋಧಕ, ಸಂಶೋಧನ ವೀರ, ಸೌಜನ್ಯದ ಸಜ್ಜನ, ಶಿಷ್ಯಾನುರಾಗಿ, ಆತ್ಮೀಯ ವಿದ್ವಾಂಸ, ಪ್ರತಿಭಾ ಸಂಪನ್ನ, ಮಾರ್ಗಕಾರ, ಹೋರಾಟಗಾರ, ವಿದ್ಯಾರ್ಥಿ ಹಿಂತಚಿಂತಕ, ವಿದ್ವತ್ ಪ್ರೇಮಿ, ಜ್ಞಾನಸಂಮೋಹನ, ಸಾಹಿತ್ಯ ಸಂಸ್ಕೃತಿಯ ಧ್ವನಿ, ಚಿಂತನಶೀಲ, ಪಾದರಸ, ಅರಿವಿನಾಚೆಯದಾರಿ, ಹಿಂಡನಗಲಿದ ಗಜ, ಶ್ರಮಸಂಸ್ಕೃತಿಯ ಪ್ರತಿಪಾದಕ, ಸ್ಫೂರ್ತಿ ಚೇತನ – ಎಂದೆಲ್ಲಾ ಗುರುತಿಸಲ್ಪಟ್ಟಿದ್ದಾರೆ, ಗೌರವಾನ್ವಿತರಾಗಿದ್ದಾರೆ.

**ಸಂ**ಶೋಧನೆಗೆ ಮತ್ತೊಂದು ಹೆಸರಾದ ಶ್ರೀ ಕಲಬುರ್ಗಿಯವರು ಬಹುಶ್ರುತರು – ವ್ಯಾಕರಣ, ಭಾಷೆ, ಛಂದಸ್ಸು, ಸಾಹಿತ್ಯ ಚರಿತ್ರೆ, ಶಾಸನಶಾಸ್ತ್ರ, ಗ್ರಂಥಸಂಪಾದನೆ, ಜಾನಪದ, ಹಸ್ತಪ್ರತಿ ಶಾಸ್ತ್ರ ಮತ್ತು ನಾಮವಿಜ್ಞಾನ ಶಾಸ್ತ್ರಗಳಲ್ಲಿ





ಬಲ್ಲಿದರು. *''ಕೆಟ್ಟಿತ್ತು ಕಲ್ಯಾಣ''* ಎಂಬ ಒಂದು ನಾಟಕ ಹಾಗೂ *''ನೀರು ನೀರಡಸಿತ್ತು''* ಎಂಬ ಒಂದು ಕವನ ಸಂಕಲನಗಳೂ ಅವರಿಂದ ರಚಿತವಾಗಿವೆ. ಒಟ್ಟು ೬೪ ಕೃತಿಗಳನ್ನು ನೀಡಿದ್ದಾರೆ. ಎಲ್ಲವೂ ಅಪ್ಪಟ ಅಪರಂಜಿಗಳು. ಕನ್ನಡ ಸಾರಸ್ವತಲೋಕ ಅವರ ಕೃತಿಗಳಿಂದ ಶ್ರೀಮಂತವಾಗಿದೆ. ಅವರ ಮಹಾಮಾರ್ಗ ಕೃತಿಯಂತೂ ಅನನ್ಯಸಾರ್ವಭೌಮ ಪ್ರಬುದ್ಧ ಗ್ರಂಥ. ಸಮಗ್ರ ವಚನ ಸಾಹಿತ್ಯದ ಪ್ರಕಟಣೆಯಂತೂ ಅವರ ಮುಡಿಗೆ ಸಂದಗೌರವದ ಸಿರಿ ಗರಿ.

ಡಾ ॥ ಕಲಬುರ್ಗಿಯವರು ವಿಶ್ವವಿದ್ಯಾಲಯ ವಲಯಕ್ಕೆ ಸೀಮಿತವಾದವರಲ್ಲ. ಶ್ರೀಯುತರಿಂದ ಅನೇಕ ಮಠಗಳು, ಸಂಘ ಸಂಸ್ಥೆಗಳು ಉಪಕೃತವಾಗಿವೆ. ಗೋಕಾಕ್ ಚಳುವಳಿ ಮತ್ತು ಅಖಿಲ ಕರ್ನಾಟಕ ಕೇಂದ್ರ ಕ್ರಿಯಾಸಮಿತಿ ಕಾರ್ಯದರ್ಶಿಗಳಾಗಿ, ಗದುಗಿನ ತೋಂಟದಾರ್ಯಮಠದ ಆಶ್ರಯದಲ್ಲಿ *'ವೀರಶೈವ ಅಧ್ಯಯನ ಸಂಸ್ಥೆಯ'* ಅಸ್ತಿತ್ವಕ್ಕೆ ಕಾರಣರಾಗಿ, ಬೆಳಗಾವಿಯ ಶ್ರೀನಾಗನೂರು ಮಠದಲ್ಲಿ *'ವೀರಶೈವ ಅಧ್ಯಯನ ಅಕಾಡೆಮಿಯ'* ಅಸ್ತಿತ್ವಕ್ಕೆ ಸ್ಫೂರ್ತಿಯಾಗಿ, ಶಿವಮೊಗ್ಗೆಯ ಆನಂದಪುರ ಮಠದಲ್ಲಿ *'ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ'ಯ* ಪ್ರಾರಂಭಕ್ಕೆ ಪ್ರೇರಕರಾಗಿ, ನಿಡಸೋಸಿಯ ಶಿವಲಿಂಗೇಶ್ವರ ಮಠದಲ್ಲಿ ಶರಣ ಸಂಸ್ಕೃತಿ ಅಕಾಡೆಮಿಯನ್ನು ಆರಂಭಿಸಲು ಕಾರಣರಾಗಿ, ಮೈಸೂರಿನಲ್ಲಿ ಶ್ರೀಸುತ್ತೂರು ಮಠದಲ್ಲಿ *'ಸಮಗ್ರ, ಸ್ವರವಚನ ಸಾಹಿತ್ಯ'* ಪ್ರಕಟನಮಾಲೆಯ ಪ್ರಾರಂಭಕ್ಕೆ ಕ್ರಿಯಾಶೀಲರಾಗಿ ಸೇವೆಗೈದಿದ್ದಾರೆ.

**ಶ್ರೀ**ಯುತರ ಸಮಗ್ರ ಸೇವೆಯನ್ನು ಗಮನಿಸಿದ ಸರ್ಕಾರ ಹಾಗೂ ಸಂಘಸಂಸ್ಥೆ ಪ್ರಶಸ್ತಿ ಪುರಸ್ಕಾರಗಳನ್ನಿತ್ತು ಗೌರವಿಸಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ, ದೇ.ಜ.ಗೌ ಟ್ರಸ್ಟಿನ ವಿಶ್ವಮಾನವ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ವರ್ಧಮಾನ ಸಾಹಿತ್ಯ ಪ್ರಶಸ್ತಿ, ಇಳಕಲ್ಲ ಚಿತ್ತರಗಿ ಮಠದ ಪ್ರಶಸ್ತಿ, **ಪಂಪ ಪ್ರಶಸ್ತಿಗಳಿಂದ** ಡಾ ॥ ಕಲಬುರ್ಗಿಯವರು ಅಲಂಕೃತರಾಗಿದ್ದಾರೆ. ಒಂದು ಮಾತು ತಮಗೆ ಪಂಪ ಪ್ರಶಸ್ತಿಯ ಜೊತೆಗೆ ಸಂದ ಒಂದು ಲಕ್ಷರೂಪಾಯಿಯ ಪ್ರಶಸ್ತಿ ಧನವನ್ನು ಬಿಟ್ಟುಕೊಟ್ಟ ಮಲ್ಲಪ್ಪಮಡಿವಾಳಪ್ಪ ಕಲಬುರ್ಗಿ ಭಿನ್ನಲೋಹದಿಂದ ಮಾಡಲ್ಪಟ್ಟವರು. *'ಅಂಬಲಿ ಕಂಬಳಿ ಆಸ್ತಿ, ಮಿಕ್ಕಿದ್ದೆಲ್ಲ ಜಾಸ್ತಿ'* ಎಂಬ ತಂದೆಯ ಅನುಭವ ವಾಣಿಯ ಬೆಳಕಿನಲ್ಲಿ *'ಭೋಗಕ್ಕಿಂತ ತ್ಯಾಗವೇ ಹಿರಿದಾದುದು'* ಎಂಬ ಆದರ್ಶವನ್ನು ಮೆರೆದಿದ್ದಾರೆ, ಅವರೊಂದು *'ಬೆರಗು'* ಎನ್ನುವಂತೆ ಬೆಳೆದಿದ್ದಾರೆ.

ಡಾ ॥ ಕಲಬುರ್ಗಿಯವರು ತತ್ವನಿಷ್ಠರು. ಸತ್ಯಪ್ರತಿಪಾದಕರು, ಅವರದು ಆಳವಾದ ಪಾಂಡಿತ್ಯ, ಅಸಾಧಾರಣವಾದ ಪ್ರತಿಭೆ, ವೀರಶೈವವನ್ನು ಕಾಯಕ–ದಾಸೋಹ ಧರ್ಮವೆನ್ನುವ ಶ್ರೀಯುತರು ಅದು ವ್ಯಕ್ತಿಕೇಂದ್ರಿತವೂ ಹೌದು, ಸಮಾಜಕೇಂದ್ರಿತವೂ ಹೌದು ಎನ್ನುತ್ತಾರೆ. *'ಲಿಂಗವ್ಯಸನಿ, ಜಂಗಮ ಪ್ರೇಮಿಯೆಂದೆನಿಸಯ್ಯಾ'* ಎಂಬ ಬಸವಣ್ಣನವರ ಮಾತಿಗೆ Live to serve the society' ಎಂದು ಅರ್ಥವಿಸುತ್ತಾರೆ. ''ಲಿಂಗಪೂಜೆ ಅದ್ನಮಾಡೋದು ತುಂಬಾ ಹಗುರ, ಆದ್ರೆ ಜಂಗಮ ದಾಸೋಹಮಾಡೋದು ಅಂದ್ರ ಸಮಾಜಸೇವೆ ಮಾಡೋದು ತುಂಬಾ ಕಠಿಣ. ಬಸವಣ್ಣನೇ ಒಂದ್‌ಕಡೆ ಹೇಳ್ತಾನೆ. ಲಿಂಗಪೂಜೆ ಮುಂಜಾನೆ ಬಿಸಿಲು, ಅಂಗಕ್ಕೆ ಹಿತವಾಯಿತ್ತು, ಜಂಗಮ ದಾಸೋಹ ಮಧ್ಯಾಹ್ನದ ಬಿಸಿಲು ಕರಕಷ್ಟವಯ್ಯಾ ಅಂತ. ಆದ್ರೂ ಅದನ್ನು ಮಾಡಬೇಕು, ಇದನ್ನೆಲ್ಲಾ ಮಾಡಿ ತೋರ್‍ಸಿದ್ದೇ ಅವರ (ಶರಣರ) ದೊಡ್ಡ ಕೊಡುಗೆ ಅನ್ನಿಸ್ತದ'' ಎನ್ನುವ ಡಾ ॥ ಕಲಬುರ್ಗಿಯವರ ಅಂತಃಕರಣದ ನುಡಿಗಳಲ್ಲಿ ಶ್ರೀ । ಮ । ನಿ । ಪ್ರ । ಸ್ವ । ಡಾ । ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಣಿಹವನ್ನೇ ಕಾಣಬಹುದಾಗಿದೆ. ಡಾ ॥ ಕಲಬುರ್ಗಿಯವರು ಶ್ರೀಮಠದಲ್ಲಿ ಈ ಹಿಂದೆ ಶ್ರೀ ಉದ್ದಾನ ಸ್ವಾಮಿಗಳವರ ಪುಣ್ಯಸ್ಮರಣೆಯ ಸಂದರ್ಭದಲ್ಲಿ ಹಾಗಲವಾಡಿಯ ಪಾಳೇಗಾರರನ್ನು ಕುರಿತು ವಿಚಾರಸಂಕಿರಣವನ್ನು ನಡೆಸಿಕೊಟ್ಟದನ್ನು ಈ ಸಂದರ್ಭದಲ್ಲಿ ಸ್ಮರಿಸಲು ಸಂತೋಷಿಸುತ್ತೇವೆ. ಆ ಸಂಬಂಧವಾಗಿ ಪಿ.ಎಚ್‌ಡಿ ಮಾಡಲು ಮಾರ್ಗದರ್ಶನಮಾಡಿ, ಗ್ರಂಥ ಪ್ರಕಟಣೆಯನ್ನು ಹಂಪೆಯ ವಿಶ್ವವಿದ್ಯಾಲಯದಿಂದ ತಮ್ಮ ಕುಲಪತಿ ಸೇವಾವಧಿಯಲ್ಲಿ ಮಾಡಿದುದನ್ನು ಇಲ್ಲಿ ಸ್ಮರಿಸುತ್ತೇವೆ.

**ಸೌ**ಮ್ಯ ಸ್ವಭಾವಕ್ಕೆ, ತಾಳ್ಮೆಗೆ, ನಮ್ರ ನಡತೆಗೆ, ಹೂಹಾಸ್ಯಪ್ರವೃತ್ತಿಗೆ, ಘನಮನಗಾಂಭೀರ್ಯಕ್ಕೆ, ಸರಳತೆಗೆ, ಅತಿಥಿಸತ್ಕಾರಕ್ಕೆ, ಶಿಷ್ಯವಾತ್ಸಲ್ಯಕ್ಕೆ, ಗುರುಲಿಂಗ ಜಂಗಮ ಪ್ರೇಮಕ್ಕೆ, ಮಿತ್ರಸಂಪತ್ತಿಗೆ, ಹೃದಯದ ತೆರೆದ ನುಡಿಗಳಿಗೆ, ಅಭಿಮಾನಿಗಳ ಐಶ್ವರ್ಯಕ್ಕೆ, ಸ್ವಧರ್ಮನಿಷ್ಠೆ, ಪರಧರ್ಮ ಸಹಿಷ್ಣುತೆಗೆ, ಮಠ ಮಾನ್ಯಗಳ ಬಗ್ಗೆ ಬೆಳೆಸಿಕೊಂಡಿರುವ ಅಭಿಮಾನಕ್ಕೆ ಹೆಸರಾದ ಡಾ ॥ ಕಲಬುರ್ಗಿಯವರು ಪರಮ ಪೂಜ್ಯರ ಬಗ್ಗೆ ಇಟ್ಟುಕೊಂಡಿರುವ ನಿಷ್ಠೆ ಅನನ್ಯವಾದುದು. ಮಹಾಮಾರ್ಗ ದೀಪಸ್ತಂಭವಾದುದು. ಕನ್ನಡ ಸಾಹಿತ್ಯ ಲೋಕದ ವಿದ್ವದ್ರತ್ನರೆನಿಸಿರುವ ಶ್ರೀಯುತರನ್ನು ಸಾಹಿತ್ಯ ಸಂಸ್ಕೃತಿಯ ಸಂಶೋಧಕರನ್ನು *'ಮಹಾಮಾರ್ಗತಪಸ್ವಿ*ಗಳೆಂದು ಗೌರವಿಸಿ ಸನ್ಮಾನಿಸಲಾಯಿತು.

## 'ಸಮಾಜಶಿವಶಿಲ್ಪಿ'
## ಶ್ರೀ ಬಲವಂತ ಸಿಂಹ ಅವರು



*ಅಧ್ಯಕ್ಷರು,*
*ರಾಜಪುರೋಹಿತ್ ಸಮಾಜ*
*ಅಕ್ಕಿಪೇಟೆ, ಬೆಂಗಳೂರು*

*'ಎತ್ತಣ ಮಾಮರ ಎತ್ತಣ ಕೋಗಿಲೆ ಎತ್ತಣಿಂದೆತ್ತ ಸಂಬಂಧವಯ್ಯಾ'* ಎನ್ನುತ್ತಾರೆ ಅಲ್ಲಮಪ್ರಭುಗಳು, ಹೌದು, ರಾಜಾಸ್ಥಾನದ ಶ್ರೀಯುತ ಬಲವಂತ ಸಿಂಹ ಅವರಿಗೂ ಶ್ರೀ ಸಿದ್ಧಗಂಗಾ ಮಠಕ್ಕೂ **'ಎತ್ತಣಿಂದೆತ್ತ ಸಂಬಂಧ'**. ಭಕ್ತಿ ಸಂಬಂಧ ಗುರು-ಶಿಷ್ಯ ಸಂಬಂಧವೆನ್ನಬೇಕು. ಭಾರತದ ಪುಣ್ಯ ಮಣ್ಣಿನಲ್ಲಿ ಭಕ್ತಿ'ನೆಲದ ಮರೆಯನಿಧಾನ'ದಂತೆ ನಿಕ್ಷೇಪವಾಗಿದೆ. ಆ ನಿಧಿನಿಧಾನವೇ ರಾಷ್ಟ್ರದ ಜೀವದ್ರವ್ಯ, ಶ್ರೀ ಬಲವಂತ ಸಿಂಹರಿಗೂ ಬೆಂಗಳೂರಿಗೂ ಶ್ರೀ ಸಿದ್ಧಗಂಗಾಮಠಕ್ಕೂ ಅವ್ಯಕ್ತ ಆತ್ಮೀಯ ಸೂತ್ರ ಬೆಸುಗೆ ಹಾಕಿದೆ.

ಶ್ರೀ ಬಲವಂತ ಸಿಂಹರು ಜನಿಸಿದ್ದು ರಾಜಾಸ್ಥಾನ ರಾಜ್ಯದ ಜಾಲೂರು ಜಿಲ್ಲೆಯ ರೇವತ ಗ್ರಾಮದಲ್ಲಿ. ೧೯೪೭ರಲ್ಲಿ ರಾಷ್ಟ್ರಕ್ಕೆ ಸ್ವಾತಂತ್ರ್ಯ ಸಂದ ಸಂದರ್ಭದಲ್ಲಿ, ತಂದೆ ಶ್ರೀ ಸೋನಾಜಿ ರಾಜ್ ಪುರೋಹಿತ್, ತಾಯಿ ಶ್ರೀಮತಿ ಸೋದರಿದೇವಿ. ಶ್ರೀಯುತರಿಗೆ ಇಬ್ಬರು ಸೋದರ ಸೋದರಿಯರು. ತಂದೆತಾಯಿಗಳು ಅನಕ್ಷರಸ್ಥರು. ಕುಟುಂಬದ ವೃತ್ತಿ ವ್ಯವಸಾಯ. ವ್ಯವಸಾಯವೆಂಬುದು ಒಂದು ವೃತ್ತಿಯಲ್ಲ ಅದೊಂದು ಸರ್ವಜನ ಪ್ರಿಯಧರ್ಮ. ರೇವತ ಗ್ರಾಮದಲ್ಲಿ ಶಾಲೆಯಿರಲಿಲ್ಲ. ಶ್ರೀ ಬಲವಂತ ಸಿಂಹರು ಖಾಸಗಿಯಾಗಿ ಮರದಡಿಯ ಶಾಲೆಯಲ್ಲಿ ಕಲಿತರು. ಅದೂ ಹೆಚ್ಚಿನದಲ್ಲ, ಓದಲು ಬರೆಯಲು ಎಷ್ಟು ಬೇಕೋ ಅಷ್ಟು ಮಾತ್ರ. ಬಡತನ ಕಲಿಸಿದ ಪಾಠ ಕಷ್ಟದ ದುಡಿಮೆ. ಯಾರ ಅನ್ನ ನೀರಿನ ಋಣ ಎಲ್ಲಿರುತ್ತದೋ ಬಲ್ಲವರಾರು. ರಾಜಾಸ್ಥಾನದ ಶ್ರೀ ಬಲವಂತ ಸಿಂಹರು ೧೯೫೯ರಲ್ಲಿ ಬೆಂಗಳೂರಿಗೆ ಬಂದರು. ಜೀವನೋಪಾಯಕ್ಕೆ ವ್ಯಾಪಾರವನ್ನವಲಂಬಿಸಿದರು. ಅದೂ ಪುಟ್ಟದಾಗಿ, ಬಸವಣ್ಣನವರು ಹೇಳುತ್ತಾರೆ *"ಆನುಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು"* ಎಂಬುದಾಗಿ, ವ್ಯಾಪಾರ ಧರ್ಮ ಚಿಂತನೆಯ ಮಾರ್ಗ ಹಿಡಿದಾಗ ಸಮಾಜ ದರ್ಶನವಾಗುವುದರಲ್ಲಿ ಸಂಶಯವಿಲ್ಲ. ಶ್ರೀ ಸಿಂಹರು ವ್ಯಾಪಾರ ದೊಡನೆ ಬೆಳೆದರು; ಧರ್ಮಮಾರ್ಗಾವಲಂಬಿ ಗಳಾದರು.

ಪ್ರತಿಯೊಬ್ಬ ಪುರುಷನ ಯಶಸ್ಸಿನ ಹಿಂದೆ ಅವನ ಧರ್ಮಪತ್ನಿಯ ಸೇವೆ-ಸಹಕಾರಗಳಿರುತ್ತವೆ ಎಂಬ ಪ್ರಸಿದ್ಧವಾದ ಮಾತೊಂದಿದೆ. ಅಂತೆಯೇ ಶ್ರೀ ಬಲವಂತ ಸಿಂಹರ ಯಶಸ್ಸಿನ ಹಿಂದೆ ಅವರ ಧರ್ಮಪತ್ನಿ ಶ್ರೀಮತಿ ಹಂಜಾದೇವಿಯವರಿದ್ದಾರೆಂಬುದು ಸ್ಮರಣೀಯ ಸಂಗತಿ. ನಗುಮುಖದ, ನಮ್ರ ಸೇವೆಗೆ ಹೆಸರಾದ ಶ್ರೀಮತಿಯವರು ಆದರ್ಶಗೃಹಿಣಿ, ಆದರ್ಶಪತ್ನಿ, ಆದರ್ಶಮಾತೆ ಮತ್ತು ಪೂಜಾನಿಷ್ಠೆಯುಳ್ಳವರಾಗಿದ್ದಾರೆಂಬುದು ಅಭಿಮಾನಪೂರ್ಣ ವಾದುದು. ಎರಡು ಗಂಡು, ಎರಡು ಹೆಣ್ಣು ಮಕ್ಕಳನ್ನು ಪಡೆದ ಧನ್ಯಜೀವಿಗಳು ಶ್ರೀ ಬಲವಂತ ಸಿಂಹ ಮತ್ತು ಶ್ರೀಮತಿ ಹಂಜಾದೇವಿಯವರು.

ಸಾಧುಗಳು, ಸಂತರು, ದಾಸರು, ಶರಣರು ಈ ರಾಷ್ಟ್ರ ಜೀವನವನ್ನು ಪಾವನಗೊಳಿಸಿದ್ದಾರೆ. ರಾಷ್ಟ್ರವೆಂದರೆ ಬರೀ ನೆಲವಲ್ಲ, ಬೆಟ್ಟಗಳಲ್ಲ, ನದಿಗಳಲ್ಲ, ಅರಣ್ಯಗಳಲ್ಲ, ಧಾರ್ಮಿಕ ಶ್ರದ್ಧೆಯುಳ್ಳ ಸುಸಂಸ್ಕೃತ ಜನತೆ. ಶ್ರೀ ಬಲವಂತ ಸಿಂಹರಂಥವರಿಂದ ಅವರು ಹುಟ್ಟಿದ ಕುಟುಂಬಕ್ಕೆ, ಸಮಾಜಕ್ಕೆ, ರಾಜ್ಯಕ್ಕೆ, ನೆಲಸಿದ ಪ್ರದೇಶಕ್ಕೆ ಘನತೆ ಗೌರವಗಳು ಮಾನ ಸನ್ಮಾನಗಳು ಸಲ್ಲುತ್ತವೆ. ಸದಾ ಕ್ರಿಯಾಶೀಲರಾದ ಶ್ರೀ ಸಿಂಹರು ಕಾರ್ಯತತ್ಪರರು, ಸಮಾಜಸಂಘಟಕರು, ದೂರದರ್ಶಿಗಳು, ಗುಣಗ್ರಾಹಿಗಳು, ಒಳ್ಳೆಯ ಕಾರ್ಯ ಸಂಯೋಜಕರು. ಅವರ ಸೇವಾಪ್ರವೃತ್ತಿಯ ಫಲವಾಗಿ ಬೆಂಗಳೂರಿನಲ್ಲಿ ರಾಜಪುರೋಹಿತ ಸಮಾಜ ಸಂಘಟಿತವಾಗುವಂತಾದುದು ಹೆಮ್ಮೆಯ ವಿಚಾರ. ೧೫ ಸಾವಿರ ಜನ ಸಂಖ್ಯೆಯುಳ್ಳಿರುವ ಸಮಾಜ ತನ್ನ ಪೂರ್ವಪರಂಪರೆಯನ್ನು ಉಳಿಸಿ, ಬೆಳಸಿಕೊಂಡು ಬರುವಂತೆ, ಬೆಂಗಳೂರಿನ ಮುಖ್ಯವಾಹಿನಿಯಲ್ಲಿ ಬೆರೆತುಬರುವಂತೆ ಶ್ರಮಿಸಿದ ಕೀರ್ತಿ ಶ್ರೀ ಬಲವಂತ ಸಿಂಹರಿಗೆ ಸಲ್ಲುತ್ತದೆ.





೧೯೮೯ರಲ್ಲಿ ರಾಜಪುರೋಹಿತ ಸಮಾಜದ ಸಂಘವನ್ನು ಸ್ಥಾಪಿಸಿ, ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸುವುದರ ಮೂಲಕ ಸಮಾಜದ ಗುರುಗಳಾದ ಶ್ರೀ ಖೇತರಾಂಜೀ ಅವರ ಶಿಷ್ಯರಾದ ಶ್ರೀ ತುಳಸೀರಾಂಜಿ ಅವರ ಕೃಪಾಶೀರ್ವಾದಕ್ಕೆ ಪಾತ್ರರಾದರು. ಶ್ರೀಯುತರು *'ಬಾಬುರಾಂ ದೇವ್'* ದೇವಾಲಯವನ್ನು ನಿರ್ಮಾಣಮಾಡಿ ೨೭.೧.೨೦೦೧ರಂದು ಸಮಾಜಕ್ಕೆ ಅರ್ಪಿಸಿ ಧನ್ಯರಾದರು. ಈ ಸಂದರ್ಭದಲ್ಲಿ ಜಲಯಾತ್ರೆಯಂತಹ ಅಭೂತಪೂರ್ವ ಮಹೋತ್ಸವವನ್ನು ಏರ್ಪಡಿಸಿ, ೧೫೦ಕ್ಕೂ ಹೆಚ್ಚು ಸಂತಶ್ರೇಷ್ಠರನ್ನು ಸಮಾವೇಶಗೊಳ್ಳುವಂತೆ ಮಾಡಿ ಶ್ರೀಮಠದ ಪರಮಪೂಜ್ಯ ಶ್ರೀ । ಮ । ನಿ । ಪ್ರ । ಸ್ವ । ಡಾ ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಮೆರವಣಿಗೆ ಯನ್ನು ಮಾಡಿ ಬೆಂಗಳೂರಿನ ಧಾರ್ಮಿಕ ಇತಿಹಾಸದಲ್ಲಿ ಬೆಳಕಿನ ಹೆಜ್ಜೆ ಗುರುತನ್ನು ಅಚ್ಚೊತ್ತಿದ ಸಾರ್ಥಕ ಪುಣ್ಯರೆನಿಸಿದರು.

ಶ್ರೀಮಠದ ಪರಮಪೂಜ್ಯರಲ್ಲಿ ಶ್ರೀ ಬಲವಂತ ಸಿಂಹರಿಗೆ ಅನನ್ಯ ಭಕ್ತಿ ಶ್ರದ್ಧೆ. ಸಮಾಜ ಸೇವೆಯಲ್ಲಿ ಶ್ರೀಗಂಧ ದಂತೆ ತಾನು ಸವೆದು ಲೋಕಕ್ಕೆ ಸುವಾಸನೆಯನ್ನು ಬೀರುವ ಶ್ರೀಗಳವರ ಆದರ್ಶಜೀವನ ಅವರಿಗೆ ಅಚ್ಚುಮೆಚ್ಚು. ತಾವೂ ಸಹ ತಮ್ಮ ಸಮಾಜಕ್ಕಾಗಿ ಸಮುದಾಯ ಭವನವನ್ನು ರೂಪಿಸ ಬೇಕು, ಶಾಲೆಯನ್ನು ಪ್ರಾರಂಭಿಸಬೇಕು, ಧರ್ಮಕಾರ್ಯ ಗಳನ್ನು ನಡೆಸಬೇಕು – ಇವುಗಳಿಗೆಲ್ಲ ಸಿದ್ಧಗಂಗಾ ಶ್ರೀಗಳವರ ಆಶೀರ್ವಾದಬೇಕು ಎನ್ನುತ್ತಾರೆ ಶ್ರೀ ಬಲವಂತ ಸಿಂಹರು.

ಸೇವೆಯಿಲ್ಲದ ವಂದನೆ ನಿಸ್ಸಾರವೆಂಬುದನ್ನರಿತ ಪ್ರಾಜ್ಞರಾದ, ಧರ್ಮಶೀಲರಾದ, ಸಮಾಜಾಭಿಮಾನಿಗಳಾದ, ಗುರುವಚನ ದಿಂದ ಲಿಂಗವನ್ನರಿತ ಜಂಗಮವನ್ನರಿತ, ಪ್ರಸಾದವನ್ನರಿತ, ತನ್ನತಾನರಿತ ಶ್ರೀ ಬಲವಂತ ಸಿಂಹರನ್ನು – ***'ಸಮಾಜಶಿವಶಿಲ್ಪಿ'*** ಎಂದು ಗೌರವಿಸಿ ಸನ್ಮಾನಿಸಲಾಯಿತು. ✪

---

## 'ಭಕ್ತಿ ಬಂಗಾರ'
## ಯಜಮಾನ್ ಶ್ರೀ ಚಿಕ್ಕವೀರಪ್ಪನವರು



*ರಘುವನಹಳ್ಳಿ, ಕನಕಪುರ ರಸ್ತೆ*
*ಬೆಂಗಳೂರು*

"ಭಕ್ತಿಯೆನ್ನುವುದು ಬಾಹ್ಯವಾಗಲಿ, ಆಂತರಿಕವಾಗಲಿ ಅದು ಸರ್ವದಾ ಶ್ರೇಷ್ಠವೇ. ಬಾಹ್ಯಭಕ್ತಿಯು ಕನಿಷ್ಠ, ಅಂತರಭಕ್ತಿಯು ಶ್ರೇಷ್ಠ ಎನ್ನುವ ಮಾತು ಸರಿಯಲ್ಲ. ಬಾಹ್ಯ ಭಕ್ತಿಯಿಲ್ಲದ ಅಂತರಭಕ್ತಿ ಅಪ್ರಯೋಜಕ; ಅಂತರಭಕ್ತಿಯಿಲ್ಲದ ಬಾಹ್ಯ ಭಕ್ತಿ ಫಲರಹಿತ, ಅವೆರಡೂ ಹೊಂದಿಕೊಳ್ಳಬೇಕು. ಆಗ ಮಾತ್ರ ಬಾಹ್ಯಾಂತರ ಜಗವೆಲ್ಲ ದೇವನ ಜಗವಾಗಿ ಕಾಣುವುದು" – ಎಂಬ ಈ ರಹಸ್ಯವನ್ನರಿತಿದ್ದಾರೆಂಬಂತಿರುವ ಶ್ರೀ ಚಿಕ್ಕವೀರಪ್ಪನವರು ಶ್ರೀ ಸಿದ್ಧಗಂಗಾ ಮಠದ ಭಕ್ತಿಬಳ್ಳಿಯಲ್ಲಿ ಅರಳಿದ ಮಧುರ ಫಲ.

ಶ್ರೀ ಚಿಕ್ಕವೀರಪ್ಪನವರು ಹುಟ್ಟಿದ್ದು ೧೯೦೯ರಲ್ಲಿ ರಘುವನಹಳ್ಳಿಯಲ್ಲಿ. ತಂದೆ ಶರಣ ಚೆನ್ನಪ್ಪನವರು, ತಾಯಿ ಶರಣೆ ಹೊನ್ನಮ್ಮನವರು. ತಾವಿನ್ನು ತಿಂಗಳ ಹಸುಳೆಯಾಗಿರು ವಾಗಲೇ ತಂದೆಯವರು ಲಿಂಗೈಕ್ಯರಾದರು. ಶ್ರೀಯುತರು ಚಿಕ್ಕಪ್ಪನವರ ಆರೈಕೆಯ ಅಂಗಳದಲ್ಲಿ ಬೆಳೆದರು. ಪ್ರಾಪ್ತವಯಸ್ಸಿನಲ್ಲಿ ಶ್ರೀಮತಿ ಚೆನ್ನಮ್ಮನವರೊಡನೆ ವಿವಾಹಿತರಾದರು. ಕುಟುಂಬವನ್ನೇ ಧರ್ಮಶಾಲೆಯನ್ನಾಗಿ ಪರಿವರ್ತಿಸಿದರು. ತುಂಬು ಜೀವನದ ಮಧುರ ಸಂಸಾರವನ್ನು ನಡೆಸಿದರು. ಪ್ರೀತಿಯ ಕಡಲಾದರು. ಗುಡುಗಿದರೆ ಸಿಡಿಲಾದರು. ಆತಿಥ್ಯಕ್ಕೆ ಹೆಸರಾದರು. ಭೀಮ ಪ್ರೀತಿಯ ಬಂಧುವೆನಿಸಿದರು. ೭ ಗಂಡು, ೧ ಹೆಣ್ಣು ಮಕ್ಕಳ ತಂದೆಯಾದರು. ಅವರಿಗೆ ೧೨ ಮೊಮ್ಮಕ್ಕಳು.

'ಮಕ್ಕಳಿರಲವ್ವಾ ಮನೆ ತುಂಬಾ' ಎಂದು ಆಶಿಸಿದ ಅಪರೂಪದ ಲೋಹದಿಂದ ನಿರ್ಮಾಣವಾದವರು ಶ್ರೀ ಚಿಕ್ಕವೀರಪ್ಪನವರು.

ದುಂಡುಮುಖ, ಗಂಡುಮೀಸೆ, ಬಿಳಿಯದಟ್ಟಿ, ಮೇಲೆ ಬಿಳಿಯದೇ ಷರಟು, ಅದರ ಮೇಲೊಂದು ವಲ್ಲಿ, ನಡೆದರೆ ಬೆಟ್ಟನಡೆದಂತೆ, ಮಾತಾಡಿದರೆ ಸ್ಫಟಿಕ ಶುದ್ಧ ಅರಳಿದಂತೆ. ಒಳಗು-ಹೊರಗೆಲ್ಲ ಥಳಥಳ, ನುಡಿಶುದ್ಧ-ನಡೆಶುದ್ಧ ಅಂಬಿಗರ ಚೌಡಯ್ಯನಂತೆ ಸ್ವಭಾವ ಪರಿಶುದ್ಧ.

ಶ್ರೀಯುತರಿಗೂ ಶ್ರೀಮಠಕ್ಕೂ ಬೆಳೆದು ಬಂದಿರುವ ಬಾಂಧವ್ಯ ಲಿಂಗೈಕ್ಯಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳವರ ಕಾಲದ್ದು. ಶ್ರೀಯುತರ ಪೂರ್ವಿಕರು ೧೯೧೮-೧೯ರಲ್ಲಿ ಭೂದಾಸೋಹವರ್ಪಿಸಿದ ನಿರ್ಮಲ ಚಿತ್ತರು. ಲಿಂಗೈಕ್ಯ ಬಂಗಾಳಿ ಚೆನ್ನಪ್ಪನವರು ಶ್ರೀ ಚಿಕ್ಕವೀರಪ್ಪನವರ ತಾತಂದಿರು. ಅವರು ಏಳು ಎಕರೆ ಮಾವಿನ ತೋಟವನ್ನು ಶ್ರೀ ಉದ್ದಾನ ಶಿವಯೋಗಿಗಳವರಿಗೆ ಅರ್ಪಿಸಿದ ಉದಾರಚರಿತರು. ಆ ಪರಂಪರೆಯ ಬಳಿವಿಡಿದು ಬಂದ ಶ್ರೀ ಚಿಕ್ಕವೀರಪ್ಪನವರು ಮನೆತನದ ವಂಶವಾಹಿಯ ವಾರಸುದಾರರು – ಆ ಎಲ್ಲ ಸದ್ಗುಣಗಳಿಗೆ.

ಶ್ರೀಯುತರು ಶ್ರೀಮಠದ ಸುಖ-ದುಃಖಗಳಲ್ಲಿ ಒಂದಾಗಿ ಬೆಳೆದವರು. ಸುಖ ಬಂದಾಗ ಪೂಜ್ಯ ಶ್ರೀಗಳವರನ್ನು ಸ್ಮರಿಸಿದ್ದಾರೆ, ದುಃಖ ಬಂದಾಗ ನೆನೆದಿದ್ದಾರೆ. ಆಕಾರದಲ್ಲಿ ಪುರುಷ ರೂಪಿಗಳು; ಅಂತಃಕರಣದಲ್ಲಿ ಮಾತೃಕರುಳಿನವರು. ಸಮಾಜಸೇವೆ ಅವರ ಜೀವನದ ಒಂದು ಅವಿಭಾಜ್ಯ ಅಂಗವಾಗಿದೆ. ಅವರನ್ನು ಕುರಿತು ಪ್ರಸಿದ್ಧ ಅಬ್ಕಾರಿಬಂಧುಗಳಾದ ಶ್ರೀ ಖೋಡೆಯವರು 'A worthy Man' ಎಂದು ಪ್ರಶಂಶಿಸುತ್ತಾರೆ. ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಶ್ರೀಯುತರಿಗೆ ಅಪಾರಭಕ್ತಿ, ಅಖಂಡ ನಿಷ್ಠೆ. ಸಭೆ ಸಮಾರಂಭಗಳಲ್ಲಿ ಪೂಜ್ಯರಿಗೆ ಅವರು ಅರ್ಪಿಸುವ ಬೃಹತ್‌ಪುಷ್ಪಹಾರ ಸೇವೆ ಅವಿಸ್ಮರಣೀಯ. ಒಮ್ಮೆ ಲಿಂಗೈಕ್ಯ ಡಾ || ಎಚ್. ತಿಪ್ಪೇರುದ್ರ ಸ್ವಾಮಿಯವರು ಅದನ್ನು ಕಂಡು ಭಕ್ತಿದುಂಬಿ *'ಎಂಥ ಅರೂಪದ ದೃಶ್ಯ, ಕಣ್ಣು ಸಾರ್ಥಕವಾದವು'* ಎಂದು ನುಡಿದರು.

ಶ್ರೀ ಚಿಕ್ಕವೀರಪ್ಪನವರದು ಹಿರಿಯನಡೆ. ವಿಶಿಷ್ಟವಾದ ಮಾರ್ಗ. ಅವರು ಮಾತುಗಾರರಲ್ಲ, ಪದವಿಪಟ್ಟಗಳನ್ನು ಆಶಿಸಿದವರಲ್ಲ, ಗಣ್ಯಮಾನ್ಯನೆನಿಸಿಕೊಳ್ಳಬೇಕೆಂಬ ಆಕಾಂಕ್ಷೆ ಅವರದಲ್ಲ, ತನ್ನನ್ನು ಆಹ್ವಾನಿಸಲಿಲ್ಲ, ಆದರಿಸಲಿಲ್ಲ ಎಂಬ ಮಾತು ಅವರಿಂದ ಬರುವುದಿಲ್ಲ, ಆದರೆ ಪೂಜ್ಯ ಶ್ರೀಗಳವರ ಸೇವೆಯ ಬಗ್ಗೆ, ಶ್ರೀಮಠದ ಬಗ್ಗೆ, ಯಾರಾದರೂ ಏನಾದರೂ ಕವಡುನುಡಿಯಾಡಿದರೆ, ಒಡಕು ಮಾತೆತ್ತಿದರೆ – ಅವರು ಯಾರೇ ಆಗಿರಲಿ, ಎಂಥವರೇ ಆಗಿರಲಿ *'ಗಣಾಚಾರ'*ವನ್ನು ಅನುಸರಿಸುತ್ತಾರೆ. ರುದ್ರಭಯಂಕರರಾಗುತ್ತಾರೆ. ಅವರದು ದಿಟ್ಟಹೆಜ್ಜೆ, ಧೀರನಡೆ. ಬಸವತತ್ತ್ವದಲ್ಲಿ ಅಪಾರಶ್ರದ್ಧೆ. ಪ್ರಸಾದಶುದ್ಧರು. ಎಲ್ಲೇ ಹೋಗಲಿ, ಯಾವುದೇ ಸಮಾರಂಭವಾಗಲಿ, ಬಂಧುಬಳಗದ ಶುಭಕಾರ್ಯವಿರಲಿ, ಅವುಗಳಲ್ಲಿ ಭಾಗಿಯಾಗುತ್ತಾರೆ. ಪ್ರಸಾದಕ್ಕೆ ಮನೆಗೇ ಬರುತ್ತಾರೆ. ಅದು ಅವರು ಪಾಲಿಸಿಕೊಂಡು ಬಂದಿರುವ ವ್ರತ. ಶರಣ ಮಾರ್ಗಾನುಯಾಯಿಗಳು ಶ್ರೀಯುತರು.

*'ರಘುವನಹಳ್ಳಿಯ* ತಾತ'ನೆಂದೇ ಶ್ರೀಸಿದ್ಧಗಂಗಾ ಪರಿಚಿತವಲಯದಲ್ಲಿ ಹೆಸರಾಗಿರುವ ಶ್ರೀಯುತರು ಶಿಕ್ಷಣಾಭಿಮಾನಿಗಳು. ತಮ್ಮ ಕ್ರಿಯಾಶೀಲತೆಯ ಫಲವಾಗಿ ರಘುವನಹಳ್ಳಿಯ ಸುಂದರ ಪರಿಸರದಲ್ಲಿ ಶ್ರೀ ಸಿದ್ಧಗಂಗಾ ಪ್ರೌಢಶಾಲೆ ಎದ್ದುನಿಂತು ಭವ್ಯನೋಟವನ್ನು ನೋಡುಗರಿಗೆ ಉಂಟುಮಾಡುವಂತಾದುದು ಪುಣ್ಯವಿಶೇಷವೇ ಸರಿ.

*"ಭುವನದ ಭಾಗ್ಯ ಬಸವಣ್ಣ, ಬಸವಣ್ಣನ ಭಾಗ್ಯ ಪರಮಪೂಜ್ಯ ಶ್ರೀ ಶ್ರೀಗಳು"*, ಶ್ರೀಗಳು ರೂಪಿಸಿ ನಡೆಸಿಕೊಂಡು ಬಂದಿರುವ ಗ್ರಾಮಾಂತರ ಬಸವಜಯಂತಿ ಆಚರಣೆಯೆಂದರೆ ಶ್ರೀ ಚಿಕ್ಕವೀರಪ್ಪನವರಿಗೆ ಉತ್ಸಾಹದ ಉಕ್ಕು, ಸಂಭ್ರಮದ ಸಡಗರ. ತಮ್ಮನ್ನು ತಾವು ಮರೆತು ಜಯಂತಿಯಲ್ಲಿ ತೊಡಗುವ ಶ್ರದ್ಧೆ. ಅದೊಂದು ಅವರಿಗೆ ಗುರುಪೂಜೆ – ಲಿಂಗಾರ್ಚನೆ – ಜಂಗಮದಾಸೋಹವಾಗಿ ಬಿಡುತ್ತದೆ. ಅಣ್ಣ ಬಸವಣ್ಣನವರು ಹೇಳುವಂತೆ *"ಕರಗಿಸಿ ಎನ್ನಮನದ ಕಾಳಿಕೆಯ ಕಳೆಯಯ್ಯಾ, ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ, ಕಡಿಹಕ್ಕೆ, ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಗೆಯ ಮಾಡಿ ಸಲಹಯ್ಯಾ"* ಎನ್ನುತ್ತಲೇ ತೊಂಬತ್ತೂರರ ತುಂಬು ಪ್ರಾಯದಲ್ಲೂ ದುಡಿಯುತ್ತಾರೆ. ಕಾಯಕ ಮುಖಿಗಳಾಗುತ್ತಾರೆ, ಸೇವೆಯಲ್ಲಿ ಶಿವನನ್ನು ಕಾಣುವ ಗ್ರಾಮೀಣ ಸೊಗಡಿನ ಬಂಧುವಾಗುತ್ತಾರೆ.

ಮಾಡಿಯೂ ಮಾಡದಂತಿರುವ ನಿರಂಹಕಾರ ನಿರ್ಮಲ ಮನಸ್ಕರಾದ ಶ್ರೀ ಚಿಕ್ಕವೀರಪ್ಪನವರನ್ನು 'ಭಕ್ತಿಬಂಗಾರ'ವೆಂದು ಗೌರವಿಸಿ ಸನ್ಮಾನಿಸಲಾಯಿತು. ☆





# ಭಾಲ್ಕಿಯ ಡಾ. ಶ್ರೀ ಚನ್ನಬಸವ ಪಟ್ಟದ್ದೇವರು

- ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ.
ಕನ್ನಡ ಪ್ರಾಧ್ಯಾಪಕರು, (ನಿವೃತ್ತ)
ಗುಲಬರ್ಗಾ ವಿಶ್ವವಿದ್ಯಾಲಯ
ಗುಲಬರ್ಗಾ.

*ಉತ್ತರ ಕರ್ನಾಟಕ ಭಾಗದಲ್ಲಿರುವ ಪ್ರಸಿದ್ಧ ವೀರಶೈವ ಮಠಗಳಲ್ಲಿ ಭಾಲ್ಕಿಮಠವು ಒಂದಾಗಿದ್ದು; ನಾಡಿನ ಸಾಮಾಜಿಕ ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಶ್ರೀಮಠದ ಅಧ್ಯಕ್ಷರಾಗಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಚನ್ನಬಸವಪಟ್ಟದ್ದೇವರು ಹಿಂದುಳಿದ ಪ್ರದೇಶಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಆ ಭಾಗದ ಜನರಲ್ಲಿ ಅರಿವಿನ ಜ್ಯೋತಿಯನ್ನು ಬೆಳಗುವಂತೆ ಮಾಡಿದ ಮಹಾಸಂತರು. ಅವರು ೧೦೮ ವರ್ಷಗಳ ಬೇವು ಬೆಲ್ಲವನ್ನು ಸವಿದು ಕಳೆದ ಎರಡುವರ್ಷಗಳ ಹಿಂದೆ ಲಿಂಗದೊಳಗಾದರು. ಎರಡನೆ ವಾರ್ಷಿಕ ಪುಣ್ಯ ಸ್ಮರಣೆಯ ಸಂದರ್ಭದಲ್ಲಿ ಅವರ ವ್ಯಕ್ತಿತ್ವವನ್ನು ಕುರಿತು ಗುಲ್ಬರ್ಗಾ ವಿಶ್ವವಿದ್ಯಾನಿಲಯದ ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಡಾ. ಎಂ.ಎಸ್. ಲಠ್ಠೆಯವರು ತಮ್ಮ ಲೇಖನದ ಮೂಲಕ ಪರಿಚಯ ಮಾಡಿಕೊಟ್ಟಿದ್ದಾರೆ.*

ಕನ್ನಡ ರಾಜ್ಯೋತ್ಸವ ಪ್ರಶಸ್ತಿ ವಿಜೇತರು, ಗುಲಬರ್ಗಾ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪ್ರಶಸ್ತಿ ಪಡೆದವರೂ ಆದ ಪೂಜ್ಯ ಡಾ|| ಶ್ರೀ ಚೆನ್ನಬಸವ ಪಟ್ಟದ್ದೇವರು ೨೨-೦೨-೧೮೯೦ ರಂದು ಬೀದರ್ ಜಿಲ್ಲಾ ಔರಾದ ತಾಲ್ಲೂಕ ಕಮಲಾನಗರದಲ್ಲಿ ರಾಚಪ್ಪ ಬುಳ್ಳಾ ಮತ್ತು ಸಂಗಮ್ಮತಾಯಿ ದಂಪತಿಗಳ ಮಗುವಾಗಿ ಜನಿಸಿದ ಮಹಾರುದ್ರ ಅವರು ೨೨-೦೪-೧೯೯೯ ರಂದು ಲಿಂಗೈಕ್ಯ ರಾದುದು ನಾಡಿಗೆ ತುಂಬಬಾರದ ಹಾನಿಯಾಗಿದೆ.

ಶ್ರೀ ಬುಳ್ಳಾ ಮಹಾರುದ್ರರು ಕಮಲಾನಗರದ ಶ್ರೀ ಶಂಕರಯ್ಯ ದೇಶಿಕರ ಹಾಗೂ ಭಾಲ್ಕಿಯ ಶ್ರೀ ಸಿದ್ಧಬಸವ ಸ್ವಾಮಿಗಳ ಸೇವೆಗೈದವರು ಕಮಲಾನಗರದ ಸಾಳಿ ಸಿದ್ರಾಮಯ್ಯ, ಮುಧೋಳದ ಶ್ರೀ ಶಿವಲಿಂಗೇಶ್ವರ ಹಾಗೂ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳಲ್ಲಿ ಅಧ್ಯಯನ ಮಾಡಿದ ಇವರು ಮಹಾನುಭಾವಿಗಳಾಗಿ ಭಾಲ್ಕಿ ಹಿರೇಮಠಕ್ಕೆ ೧೯೨೪ ರಲ್ಲಿ ಚೆನ್ನಬಸವರಾಗಿ ಪಟ್ಟಾಧಿಕಾರಿಗಳಾದರು.

ಶ್ರೀ ಮಹಾರುದ್ರರು ಎಂಟುವರಷದವರಿದ್ದಾಗ ಭಾಲ್ಕಿಯ ಶ್ರೀ ಸಿದ್ಧಬಸವಸ್ವಾಮಿಗಳು, 'ಚೆನ್ನಬಸವ' ಎಂದು ನಾಮಕರಣ ಮಾಡಿ ಅಯ್ಯಾಚಾರ ದೀಕ್ಷೆ ಕೊಟ್ಟರು, ಅಷ್ಟಿಷ್ಟು ಕನ್ನಡವನ್ನು ಔರಾದದ ಅಮರೇಶ್ವರ ಗುಡಿಯಲ್ಲಿದ್ದ ಕೇದಾರಗಳಂಗಳಪ್ಪ ಕನ್ನಡ ಶಾಲೆಯಲ್ಲಿ ಕಲಿತುಕೊಂಡರು. ಮಾರಾಠಿಯನ್ನು ಕಲಿತುಕೊಂಡರು. ಚಿಕ್ಕ ವಯಸ್ಸಿನಲ್ಲಿಯೆ ಶಬರಿಶಂಕರ ವಿಳಾಸ ರಾಜಶೇಖರ ವಿಳಾಸ, ವೃಷಬೇಂದ್ರ ವಿಜಯ, ಕರ್ನಾಟಕ ಶಬ್ದಮಂಜರಿ ಮೊದಲಾದ ಕಾವ್ಯ ಕೃತಿಗಳನ್ನು ಅಭ್ಯಾಸ ಮಾಡಿದರು. ಹದಿನಾರು ವರುಷದವರಾದಾಗ ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು ಇವರಿಗೆ ಪ್ರಸಾದ ದೀಕ್ಷೆ ನೀಡಿದರು. ಸಂಸ್ಕೃತ ಕಲಿತರು, ವಚನಗಳ ಅಭ್ಯಾಸ ಮಾಡಿದರು. ವೀರಶೈವ ತತ್ವ ಸಿದ್ಧಾಂತಗಳ ಅಭ್ಯಾಸದೊಂದಿಗೆ ಕುಮಾರಸಂಭವ, ರಘುವಂಶ, ನಿಜಗುಣರಕೃತಿಗಳ, ಶತಕಪ್ರಿಯ, ಶೂನ್ಯ ಸಂಪಾದನೆ, ಪ್ರಭುಲಿಂಗಲೀಲೆ, ಬಸವಪುರಾಣ ಮೊದಲಾದ ಕಾವ್ಯ ಪುರಾಣಗಳ ಅಭ್ಯಾಸವನ್ನೂ ಮಾಡಿದರು.

ಶ್ರೀ ಚೆನ್ನಬಸವಪಟ್ಟಾಧಿಕಾರಕ್ಕೆ ಕೆಳದಿಯ ಶ್ರೀಮದ್ ಘನಲಿಂಗ ಚಕ್ರವರ್ತಿ, ಶ್ರೀ ರೇವಣಸಿದ್ಧ ಸ್ವಾಮಿಗಳು ಆಗಮಿಸಿ ಸ್ಥಿರಪಟ್ಟಾಧಿಕಾರ ನೆರವೇರಿಸಿಕೊಟ್ಟರು. ಶ್ರೀ ಹಾನಗಲ್ಲ

ಕುಮಾರ ಸ್ವಾಮಿಗಳೂ ಆಗಮಿಸಿ, ಗಡಿಭಾಗದ ಈ ಪ್ರದೇಶದಲ್ಲಿ ಕನ್ನಡದ ಕಂಪನ್ನು ಪಸರಿಸಬೇಕೆಂದೂ ಶಿಕ್ಷಣ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸಬೇಕೆಂದೂ ಮತ್ತು ಹಾಳಾಗುತ್ತಿರುವ ಧರ್ಮದ ಜೀರ್ಣೋದ್ಧಾರ ಕಾರ್ಯವನ್ನು ಭರದಿಂದ ಕೈಗೊಳ್ಳಬೇಕೆಂದೂ ಆಶೀರ್ವದಿಸಿದರು. ಗುರುಗಳ ಇಚ್ಛೆಯಂತೆ ಸೇವೆ ಮಾಡುವೆ ಎಂದು ಪ್ರತಿಜ್ಞೆಗೈದ ಶ್ರೀ ಚೆನ್ನಬಸವರು ಪ್ರತಿಜ್ಞೆ ಸ್ವೀಕರಿಸಿದರು. ಆ ರೀತಿ ಶೈಕ್ಷಣಿಕ ಧಾರ್ಮಿಕ ಕ್ಷೇತ್ರದಲ್ಲಿ ಅಪ್ರತಿಮ ಸೇವೆ ಸಲ್ಲಿಸಿ ಗಡಿಭಾಗದಲ್ಲಿ ಕನ್ನಡದ ಕಂಪನ್ನು ಹರಡಿದರು.

ಶ್ರೀ ಚೆನ್ನಬಸವರು ಭದ್ರವಾದ ನೈತಿಕ ನೆಲಗಟ್ಟಿನ ಮೇಲೆ ಸಚ್ಚಾರಿತ್ರ್ಯ ವ್ಯಕ್ತಿತ್ವ ರೂಪಿರಿಸೊಂಡಿದ್ದರು. ಕಟ್ಟಾ ಮಡಿವಂತರಿದ್ದರು. ಹೆಣ್ಣು ಮಕ್ಕಳಿಂದ ದೂರಿದ್ದರು. ಅಂತರಂಗ ಬಹಿರಂಗ ಶುದ್ಧಿ ಪಡೆದುಕೊಂಡಿದ್ದ ಪೂಜ್ಯರು ಸತ್ಯನುಡಿ, ಅಹಿಂಸಾಮಾರ್ಗ, ಸದಾಚಾರ ಹಾಗೂ ಸದುವಿನಯದ ಸಾಕಾರ ಮೂರ್ತಿಗಳಾಗಿದ್ದರು. ಕಾಯಕ ಧೀರರೂ, ದಾಸೋಹ ಪ್ರೇಮಿಗಳೂ ಆಗಿದ್ದರು. ಬಸವಾದಿ ಶಿವಶರಣರ ವಚನಗಳು ಶ್ರೀಗಳವರ ಜೀವನದ ಹಾಸು ಹೊಕ್ಕಾದವು. ಪ್ರತಿನೀತ್ಯ ವಚನಪಠಣ, ಚಿಂತನ, ಪ್ರಾರ್ಥನೆ, ಉಪದೇಶದಲ್ಲಿ ತಲ್ಲೀನರಾಗಿರುತ್ತಿದ್ದರು.

ಭಾಲ್ಕಿಯ ಶ್ರೀಮದ್ ಘನಲಿಂಗ ಚಕ್ರವರ್ತಿ ಚೆನ್ನಬಸವರು ಪಟ್ಟಾಧಿಕಾರಿಗಳಾದ ಬಳಿಕ ಮೂಲ ಹಾಗೂ ಶಾಖಾಮಠಗಳ ಸ್ಥಿರ-ಚರ ಆಸ್ತಿ ಸಂರಕ್ಷಣೆ ಮಾಡಿದರು. ಸ್ವತಃ ಹೊಲಕ್ಕೆ ಹೋಗಿ ನೇಗಿಲ ಹೊಡೆದರು. ಉತ್ತಿ ಬಿತ್ತಿದರು. ಆರ್ಥಿಕ ಸಂಪತ್ತನ್ನು ಹೆಚ್ಚಿಸಿ ಕೊಂಡರು. ಒಕ್ಕಲುತನದೊಂದಿಗೆ ಶೈಕ್ಷಣಿಕ, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಅಭಿವೃದ್ಧಿ ಸಾಧಿಸಿದರು. ಕಾರಾಮುಂಗಿ, ಮೈನಳ್ಳಿ, ಮೋರಗಿ ಮಠಗಳ ಪ್ರಗತಿ ಸಾಧಿಸಿದರು. ಗಡಿಭಾಗದಲ್ಲಿ ಕನ್ನಡ ಕಲಿಸಿದರು. ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರು.

ಸರಳ ಸಜ್ಜನಿಕೆಗೆ ಹೆಸರಾದ ಶ್ರೀಗಳು ಅಪ್ಪ, ಅಣ್ಣ ಎಂದು ಮಾತನಾಡುತ್ತ ಶರಣ ಸಂಸ್ಕೃತಿಯ ಹರಿಕಾರರಾಗಿ ಶಾಂತಿ ಸಮಾಧಾನಗಳನ್ನು ತಂದುಕೊಂಡರು. ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಅಣ್ಣನವರ ಸೂಳ್ನುಡಿಯಂತೆ ಮಹಾಭಕ್ತರೆನಿಸಿ, ಆಧುನಿಕ ಭಕ್ತಿ ಭಾಂಡಾರಿ ಗಳೆನಿಸಿದರು.

ಕ್ರಿ. ಶ. ೧೯೩೬ರಲ್ಲಿ ಆಂಧ್ರಪ್ರದೇಶದ ನಾರಾಯಣ ಖೇಡ ತಾಲ್ಲೂಕಿನ ಮೋರಗಿಯಲ್ಲಿ 'ಶಾಂತಿವರ್ಧಕ ಗುರುಕುಲ ಆಶ್ರಮ ಹೆಸರಿನಲ್ಲಿ ಶಾಲೆಯೊಂದನ್ನು ಸ್ಥಾಪಿಸಿ ದರು. ೩೪ ಎಕರೆ ಭೂಮಿಯಲ್ಲಿ ಗುಡಿಸಲು ನಿರ್ಮಿಸಿ ಅಧ್ಯಯನಕ್ಕೆ ಮಕ್ಕಳಿಗೆ ಅನುಕೂಲ ಮಾಡಿಕೊಟ್ಟರು. ನೂರಾರು ವಿದ್ಯಾರ್ಥಿಗಳು ನಾಲ್ಕನೆ ಈಯತ್ತೆವರೆಗೆ ಇಲ್ಲಿ ಓದತೊಡಗಿದರು. ನಿಜಾಮನ ಆಳ್ವಿಕೆಯಲ್ಲಿದ್ದ ಈ ಪ್ರದೇಶ ದಲ್ಲಿ ಕನ್ನಡಕ್ಕೆ ಸ್ಥಾನ ಮಾನ ಇಲ್ಲದಾಗ ಧೈರ್ಯದಿಂದ, ಜನತೆಯ ಸಹಕಾರದಿಂದ ಕನ್ನಡ ಶಾಲೆಗಳನ್ನು ನಡೆಸಿದರು. ಹೊರಗಡೆ ಉರ್ದುವಿನಲ್ಲಿ ಪಾಠಶಾಲೆ ಬೋರ್ಡು ಹಾಕಿ ಒಳಗೆ ಮಕ್ಕಳಿಗೆ ಕನ್ನಡದಲ್ಲಿ ಪಾಠ ಹೇಳುತಿದ್ದರು. ಕನ್ನಡ ಕಲಿಸುವ ಶಿಕ್ಷಕರ ಸಂಬಳ ಮತ್ತು ಮಕ್ಕಳ ಪ್ರಸಾದಕ್ಕೆಂದು 'ಮುಷ್ಟಿಫಂಢ' ಯೋಜನೆಯೊಂದನ್ನು ಜಾರಿಗೆ ತಂದಿದ್ದರು. ಜಹಿರಾಬಾದ, ಉದಗೀರ, ಹಣೆಗಾಂವ, ಭಾಲ್ಕಿ, ಸಂಗಮ, ಕಮಾಲನಗರ ಮೊದಲಾದ ಗ್ರಾಮಗಳಲ್ಲಿ ನಡೆಸುತ್ತಿದ್ದ ಈ ಕನ್ನಡ ಶಾಲೆಗಳ ಮೇಲೆ ದುಷ್ಕರ್ಮಿಗಳು ಕಣ್ಣಿಟ್ಟರು. ಕಾಶಿಮ ರಜವಿ ಎಂಬುವನ ದುಷ್ಕೃತ್ಯದಿಂದಾಗಿ ಈ ಭಾಗದ ಜನತೆ ಸೊಲ್ಲಾಪುರಕ್ಕೆ ತೆರಳಿ ಅಲ್ಲಿ ಆಶ್ರಮ ಪಡೆದರು. ಪೋಲಿಸ ಕಾರ್ಯಚರಣೆಯಾಗಿ ಹೈದ್ರಾಬಾದ್ ಸಂಸ್ಥಾನವು ಭಾರತದಲ್ಲಿ ವಿಲೀನಗೊಂಡಿತು. ಆಗ ಭಾಲ್ಕಿ ಶ್ರೀಗಳು ತಮ್ಮ ವಿದ್ಯಾರ್ಥಿ ಶಿಕ್ಷಕರೊಂದಿಗೆ ಸಂಗಮಕ್ಕೆ ಬಂದು ತಮ್ಮ ಕಾಯಕಸೇವೆಯನ್ನು ಮುಂದುವರಿಸಿದರು.

ಶ್ರೀ ಚೆನ್ನಬಸವ ಪಟ್ಟದ್ದೇವರು ಪ್ರಾರಂಭಿಸಿದ ಕನ್ನಡ ಶಾಲೆಗಳು ಪ್ರೌಢಶಾಲೆಗಳಾದವು, ಪದವಿಪೂರ್ವ ಕಾಲೇಜು ಗಳಾದವು, ಪದವಿ ಕಾಲೇಜುಗಳಾದವು, ತಾಂತ್ರಿಕ ಕಾಲೇಜು ಗಳೂ ಆದವು - ಹೀಗೆ ಹಲವಾರು ಶಿಕ್ಷಣ ಸಂಸ್ಥೆಗಳು ಶಾಂತಿವರ್ಧಕ ಶಿಕ್ಷಣ ಸಂಸ್ಥೆಯಿಂದ ನಡೆಯತೊಡಗಿದವು.

ಶ್ರೀ ಚೆನ್ನಬಸವ ಪಟ್ಟದ್ದೇವರದು ವಿಶ್ವವಿಶಾಲದೃಷ್ಟಿ, ಅವರು ವಿಶ್ವ ಕುಟುಂಬಿಗಳು, ಸ್ವಾರ್ಥವಿಲ್ಲದ ಪರೋಪಕಾರ ಜೀವನ. ಆಡಂಬರವಿಲ್ಲದ ಸರಳಸ ಜ್ಜನರು 'ಸಕಲ ಜೀವಾತ್ಮರಿಗೆ ಲೇಸ ಬಯಸುವ ನುಡಿ ಮಂತ್ರ ಅವರದು.





ಬಸವಾದಿ ಶರಣರ ಸಾಂಸ್ಕೃತಿಕ ಬದುಕಿನ ನಿಜಾನುಭವನನ್ನು ಬಿತ್ತರಿಸುವ ಧ್ಯೇಯೋದ್ದೇಶ ಪೂಜ್ಯರದಾಗಿತ್ತು. ಅಂತೆಯೆ ಈ ಭಾಗದ ಹೈದರಾಬಾದ್ ವೀರಶೈವ ಪರಿಷತ್ತಿನ ಸದಸ್ಯರಾಗಿ ವೀರಶೈವ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದರು. ವೀರಶೈವರಲ್ಲಿದ್ದ ಒಳಪಂಗಡಗಳನ್ನು ಯಾವ ಮುಲಾಜು ಇಲ್ಲದೆ ಹೋಗಲಾಡಿಸುವಲ್ಲಿ ಧೈರ್ಯದಿಂದ ಪ್ರಯತ್ನಿಶೀಲರಾದರು. ಅಂಗದ ಮೇಲೆ ಲಿಂಗವಿದ್ದ ಸದ್ ಭಕ್ತರೆಲ್ಲರನ್ನೂ 'ಸಂಗ' ಎಂದೇ ಬಗೆದರು. ಅಸ್ಪೃಶ್ಯತೆಯನ್ನು ಹೋಗಲಾಡಿಸುವಲ್ಲಿ ಶ್ರೀಗಳು ಬಹಳಷ್ಟು ಶ್ರಮಿಸಿದರು. ಅಂತರ್ಜಾತೀಯ ವಿವಾಹಗಳನ್ನು ನೆರವೇರಿಸಿದರು.

ಅಸ್ಪೃಶ್ಯರ ಗುಣಾವಗುಣಗಳನ್ನು ಪರಿಗಣಿಸಿದ ಶ್ರೀಗಳವರು ಸದಾಚಾರಿ, ಸದ್ಗುಣಗಳಿಗೆ ಲಿಂಗ ದೀಕ್ಷೆಯನ್ನು ನೀಡಿ ಉದ್ಧರಿಸಿರುವರು. ಬೆಲ್ದಾಳದ ಶ್ರೀ ಸಿದ್ಧರಾಮ ಶರಣರನ್ನು ಇಲ್ಲಿ ಉದಹರಿಸಬಹುದಾಗಿದೆ.

ಹೈದ್ರಾಬಾದಿನಲ್ಲಿ ವೀರಶೈವ ಹಾಸ್ಟೆಲ್ ಒಂದನ್ನು ಪ್ರಾರಂಭಿಸುವ ಶ್ರೇಯಸ್ಸು ಶ್ರೀ ಚೆನ್ನಬಸವ ಪಟ್ಟದ್ದೇವರಿಗೆ ಸಲ್ಲವಂತದ್ದಾಗಿದೆ. ಬಸವಕಲ್ಯಾಣದಲ್ಲಿ ಅನುಭವ ಮಂಟಪ ಕಟ್ಟಡ ಒಂದನ್ನು ಕಟ್ಟಿಸಿ ಬಸವಾದಿಶರಣರ ಸಂದೇಶ ಬಿತ್ತರಿಸಲು ಅನುವು ಮಾಡಿಕೊಟ್ಟಿರುವರು. ಹೀಗೆ ಭಾಲ್ಕಿಯ ಶ್ರೀ ಚೆನ್ನಬಸವ ಪಟ್ಟದ್ದೇವರು ಮಾನವೀಯತೆಯನ್ನು ಮೆರೆಯುವುದಕ್ಕಾಗಿ, ರಾಷ್ಟ್ರ ಪ್ರೇಮ ಬೆಳೆಯಿಸಿ ಕೊಳ್ಳುವುದಕ್ಕಾಗಿ ತಾವೂ ಕಲಿತರು. ಇತರರಿಗೆ ಕಲಿಸಿದರು. ವಿದ್ಯೆ ಬುದ್ಧಿ ಸಂಪಾದಿಸಿದರು. ಸಮಾಜ ಸೇವೆ ಕೈಗೊಂಡರು. ಸಾಮಾಜಿಕ ಸುಧಾರಣೆಗೈದರು. ಇಂತ ಘನವ್ಯಕ್ತಿತ್ವದ ಪೂಜ್ಯ ಶ್ರೀಮದ್ ಘನಲಿಂಗ ಚಕ್ರವರ್ತಿ ಚೆನ್ನಬಸವ ಪಟ್ಟದ್ದೇವರಿಗೆ ಅವರ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು "ಕನ್ನಡ ರಾಜ್ಯೋತ್ಸವ ಪ್ರಶಸ್ತಿ'ಯನ್ನು ಗುಲಬರ್ಗಾ ವಿಶ್ವವಿದ್ಯಾಲಯವು "ಗೌರವ ಡಾಕ್ಟರೇಟ್' ಪದವಿಯನ್ನು ನೀಡಿ ಗೌರವಿಸಿದೆ.

> ಜೀವನವನ್ನು ಅರ್ಥಮಾಡಿಕೊಳ್ಳುವುದು ಮಾನವನ ಪ್ರಥಮ ಕರ್ತವ್ಯ.
>
> ಶ್ರೀವಾಣಿ

## ಶ್ರೀವಾಣಿ

### ಬಸವತತ್ತ್ವಗಳನ್ನು ಆಚರಣೆಗೆ ತರಬೇಕು

ಜಗತ್ತು ವೇಗವಾಗಿ ಮುಂದುವರಿಯುತ್ತಿದೆ. ಊಹಿಸಲಾಗದು, ಕಲ್ಪಿಸಿಕೊಳ್ಳಬಾರದು ನಮ್ಮ ಹಿರಿಯ ರಿಗೆ ಇಲ್ಲವಾಗಿದ್ದ ಸೌಲಭ್ಯ ಇಂದು ನಮ್ಮದಾಗಿದೆ. ಆದರೆ ಶಾಂತಿಯಿಲ್ಲವಾಗಿದೆ. ಹಿಂದೆ ಶಾಂತಿಯಿತ್ತು, ಸೌಲಭ್ಯ ಗಳ ಅಭಾವವಿತ್ತು. ಇತಿಹಾಸವನ್ನು ಅವಲೋಕಿಸಿದಾಗ ಸಾವಿರಾರು ರಾಜರು ಆಗಿಹೋಗಿದ್ದಾರೆ. ಅವರನ್ನಿಂದು ಯಾರೂ ಸ್ಮರಿಸುತ್ತಿಲ್ಲ. ಆ ಇನ್ನೊಂದು ವರ್ಗದ ಜನರಿದ್ದಾರೆ. ಲೋಕಕ್ಕಾಗಿ ಬದುಕಿದವರು. ಅವರನ್ನಿಂದು ಸ್ಮರಿಸುತ್ತೇವೆ. ಲೋಕಪೂಜ್ಯರಾಗಿದ್ದಾರೆ. ಯೇಸು, ಬುದ್ಧ, ಬಸವ, ಗಾಂಧಿ ಅವರು ಸ್ಮರಣಾರ್ಹರಾಗಿದ್ದಾರೆ. ಧರ್ಮ ಕೊಟ್ಟವರು ಧರ್ಮ ಸಂಕೋಚ ವಾದದ್ದಲ್ಲ, ವ್ಯಾಪಕ ವಾದದ್ದು. ವಿಜ್ಞಾನ ಮಹಾಶಕ್ತಿದಾಯಿನಿ ನಿಜ. ಹೊಸದಾಗಿ ಏನನ್ನೂ ಕೊಡಲಾಗದು. ಇರುವುದ ರಿಂದಲೇ ಹೊಸದನ್ನು ಹೊರಗೆ ತರುವ ಒಂದು ಮಾಧ್ಯಮ ವಿಜ್ಞಾನ. ಬಾಂಬು ವಿಜ್ಞಾನದ ಕೊಡುಗೆ. ಆದರದು ವಿನಾಶಾತ್ಮಕ. ಬಂದದ್ದೇನು? ಧರ್ಮ ಆದೇಶ ಕೊಡು ತ್ತಿದೆ. ಮನುಷ್ಯನಾಗಿ ಬಾಳು ಎಂದು ಹೇಳುತ್ತಿದೆ. ದೇಶ ಸಾಲದ ಭಾರದಿಂದ ಕುಸಿದು ಬೀಳುತ್ತಿದೆ. ಬಸವಣ್ಣನವರು ದೊಡ್ಡ ವಿಚಾರವಾದಿ. ಜೀವನವನ್ನು ಸಮಗ್ರವಾಗಿ ದರ್ಶನ ಮಾಡಿಕೊಂಡವರು. ಜೀವನ ಒಂದು ರತ್ನವಿದ್ದಂತೆ. ಅದನ್ನು ಗೌರವಿಸಬೇಕು; ಅರಿತು ಬಾಳಬೇಕು. ಜೀವಿತಾವಧಿ ಪರಿಮಿತ ವಾದುದು. ಅಂತ್ಯ ಅನಿರೀಕ್ಷಿತ ವೆಂದು ಗ್ರಹಿಸಿ ಬಾಳಬೇಕು. ಬಸವಣ್ಣನ ಪ್ರಪಂಚ ವಿಶ್ವಪ್ರಪಂಚ. ಮರ್ತ್ಯ ಲೋಕ ಮಾಯೆಯೆಲ್ಲ; ಕರ್ತಾರನ ಕಮ್ಮಟ. ಜಗತ್ತು ಮಹಾಶಕ್ತಿಯಿಂದ ವ್ಯಾಪಕವಾಗಿದೆ. ಜೀವನ ಸೌಕರ್ಯ ಗಳು ಬೇಕು. ಬಸವಣ್ಣನವರು ಮಾಡಿದ ಬಹುದೊಡ್ಡ ಸಾಮಾಜಿಕ ಪರಿವರ್ತನೆ ಯೆಂದರೆ ದುಡಿದು ಉಣ್ಣುವ ಸಂಸ್ಕೃತಿಯನ್ನು ನಿರ್ಮಾಣ ಮಾಡಿದ್ದು. ಬಸವತತ್ತ್ವಗಳು ಜಗತ್ತಿನ ಸಮಸ್ಯೆಗಳಿಗೆ ಪರಿಹಾರ ಕೊಡಬಲ್ಲುವು. ಅವುಗಳನ್ನು ನಾವು ಆಚರಣೆಗೆ ತರಬೇಕು. ಅದರಿಂದ ನೆಮ್ಮದಿ.

# ಮಠದಿಂದ ತಮಿಳುನಾಡಿಗೆ

- ಹೆಚ್.ವಿ. ವೀರಭದ್ರಯ್ಯ

ನಡುರಾತ್ರಿ ಕಳೆದು ಎರಡು ಘಂಟೆಯ ಸಮಯ - ನಾನು ಬರ್ತೀನಿ. ಬೆಳಗ್ಗೆ ಬಿಳಿಕಲ್‌ಗೆ ಹೋಗಬೇಕು. ನಾಟಕದಲ್ಲಿ ಯಾವುದನ್ನೂ ಬಿಡಬೇಡಿ. ಜನತುಂಬಾ ಸೇರಿದ್ದಾರೆ ಎಂದು ಆದೇಶಿಸಿದ ಪರಮಪೂಜ್ಯ ಶ್ರೀಶ್ರೀಗಳವರು, ಲೇಖಕನನ್ನು ಕುರಿತು ನಿನ್ನ ದೃಶ್ಯ ಮುಗಿದ ಮೇಲೆ ಬೇಗ ಬಂದುಬಿಡು, ತಡ ಮಾಡಬೇಡ, ಹತ್ತು ಘಂಟೆಗೆ ಸರಿಯಾಗಿ ಬಿಳಿಕಲ್ ಬೆಟ್ಟದಲ್ಲಿರಬೇಕು ಎಂದು ಹೇಳಿ ಶ್ರೀಮಠಕ್ಕೆ ದಯಮಾಡಿಸಿದರು. ಹಾಗೆ ಅಪ್ಪಣೆ ಕೊಡಿಸಿದ್ದು ದಿನಾಂಕ ೩.೪.೨೦೦೧ರಂದು ಗುಬ್ಬಿ ತಾಲ್ಲೂಕು ಮಡೇನಹಳ್ಳಿಯಲ್ಲಿ. ಬಸವ ಜಯಂತಿ ಪ್ರಯುಕ್ತ ನಡೆದಿದ್ದ ನಾಟಕ ಪ್ರದರ್ಶನದ ಸಂದರ್ಭದಲ್ಲಿ.

ದಿನಾಂಕ ೪.೪.೨೦೦೧ರಂದು ಮುಂಜಾನೇ ೭.೧೫ಕ್ಕೆ ಸರಿಯಾಗಿ ಶ್ರೀಮಠದಿಂದ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿನ ಉರಿಗಂ ಗ್ರಾಮದ ಸಮೀಪದ ಬಿಳಿಕಲ್‌ಗೆ ಪ್ರಯಾಣ ಪ್ರಾರಂಭಿಸಿದೆವು. ತಂಗಾಳಿ ಹಿತವಾಗಿತ್ತು. ಡ್ರೈವರ್ ರಾಜು ಎಚ್ಚರಿಕೆಯಿಂದ ಕಾರು ನಡೆಸುತ್ತಿದ್ದ. ಶ್ರೀಗಳವರು ಪೂಜಾರಸ ಚಿತ್ತಪ್ರಸನ್ನತೆಯಿಂದ ಪ್ರಶಾಂತವದನರಾಗಿ ಕಾಣುತ್ತಿದ್ದರು. ಅವರನ್ನು ನೋಡುವುದೇ ಒಂದು ಮಹಾಭಾಗ್ಯವೆಂಬಂತಿತ್ತು. ನಾಟಕ ಎಷ್ಟೊತ್ತಿಗೆ ಮುಗಿಯಿತು? ಹೌದು, ನೀನು ಮುಂಚೆಯೇ ಬಂದೆಯಲ್ಲವೇ? ಆರು ಘಂಟೆಗೆ ಮುಗಿದಿರಬೇಕು ಎನ್ನುತ್ತ ಬಸವಣ್ಣನವರ ದಿವ್ಯ ಜೀವನವನ್ನು ಅರ್ಥ ಮಾಡಿಕೊಳ್ಳುವಲ್ಲಿ ನಾವಿನ್ನೂ ಬಹಳದೂರ ನಡೆಯಬೇಕಾಗಿದೆ ಎಂದರು. ೯೪ರ ತುಂಬು ಹರೆಯದ ಶ್ರೀಗಳವರು ತಮ್ಮ ಸೇವಾ ಜೀವನದುದ್ದಕೂ ಬಸವಾದಿ ಪ್ರಮಥರ ಗುರುಪಥವನ್ನೇ ಕ್ರಮಿಸಿದವರು.

ಆದರೂ ಅವರಿಗೆ ತೃಪ್ತಿ ಸಾಲದು. ಇನ್ನಿಷ್ಟು ತತ್ವ ಪ್ರಚಾರ ಮಾಡಬೇಕು, ಅದಕ್ಕೆ ನಾಟಕ ಮಾಧ್ಯಮ ಸಮರ್ಥ ಸಾಧನ ಎಂದೇ ನಂಬಿ ನಡೆದಿದ್ದಾರೆ. ಕಾರು ಓಡುತ್ತಿತ್ತು. ಬೆಂಗಳೂರನ್ನು ದಾಟಬೇಕಾದರೆ ಎಂಟೂ ಮುಕ್ಕಾಲು ಘಂಟೆಯಾಯಿತು. ನಗರದಲ್ಲಿ ಜನಸಂಚಾರ, ವಾಹನಗಳ ದಟ್ಟಣೆ, ರಸ್ತೆಯ ನಿಯಮಗಳನ್ನು ಅನುಸರಿಸಿ ಕನಕಪುರ ರಸ್ತೆಗೆ ಬರಬೇಕಾದರೆ ಕಾಲ ಒಂಭತ್ತರ ಸಮೀಪಕ್ಕೆ ಧಾವಿಸುತ್ತಿತ್ತು.

ಕನಕಪುರದ ಶ್ರೀ ದೇಗುಲಮಠದ ಆವರಣದೊಳಗೆ ಪ್ರವೇಶಿಸಿದೆವು. ಪೂಜ್ಯ ಶ್ರೀಗಳವರನ್ನು ಭಕ್ತಿಯಿಂದ ಪೂಜ್ಯಶ್ರೀ ಮುಮ್ಮಡಿ ಮಹಾಲಿಂಗಸ್ವಾಮಿಗಳು ಮಠದ ಸಿಬ್ಬಂದಿಯೊಡನೆ ಸ್ವಾಗತಿಸಿದರು. ಪರಮಪೂಜ್ಯರು ವೀರಭದ್ರಯ್ಯ ಪ್ರಸಾದ ಮಾಡಿಕೊಂಡು ಬಂದಿಲ್ಲ. ವ್ಯವಸ್ಥೆ ಮಾಡಿ ಎನ್ನುತ್ತ, ರಾತ್ರಿ ನಾಟಕವಿತ್ತು, ನೇರವಾಗಿ ಬಂದಿದ್ದಾನೆ ಎಂದು ತಿಳಿಸಿದರು. ಶ್ರೀಗಳವರ ಪಾದಪೂಜೆ ಮುಗಿದು ಅಲ್ಲಿಂದ ಎರಡು ಕಾರುಗಳಲ್ಲಿ ಪ್ರಯಾಣ ಮುಂದುವರೆಯಿತು. ಹುಣಸನಹಳ್ಳಿ ಮಾರ್ಗವಾಗಿ ಉರಿಗಂ ತಲುಪಿದಾಗ ಹತ್ತೂವರೆಯಾಯಿತು. ದಾರಿ ತುಂಬಾ ಕೆಟ್ಟದ್ದಾಗಿದ್ದರಿಂದ ನಿಧಾನವಾಗಿ ವಾಹನಗಳು ಚಲಿಸುತ್ತಿದ್ದವು. ಉರಿಗಂ ದೊಡ್ಡ ಊರು. ತಮಿಳುನಾಡಿನ ಗಡಿ ಪ್ರದೇಶದ ಗ್ರಾಮ. ಮನೆಯ ಮಾತು ಕನ್ನಡ. ಆದರೆ ಆಡಳಿತ ಭಾಷೆ, ಶಿಕ್ಷಣ ಮಾಧ್ಯಮ ತಮಿಳು. ಶಿವಭಕ್ತಿಗೆ ಹೆಸರಾದ ತಮಿಳುನಾಡಿನಲ್ಲಿ ಗುರುಲಿಂಗ ಜಂಗಮ ಪ್ರೇಮ ಇನ್ನೂ ನಳನಳಿಸುತ್ತಿದೆ ಎಂಬಂತೆ ಶ್ರೀಗಳವರ ಕಾರನ್ನು ಕಂಡ ಗ್ರಾಮೀಣ ಬಂಧು- ಭಗಿನಿಯರು ದಿಂಡುಗೆಡೆಯುತ್ತಿದ್ದುದನ್ನು ಕಂಡಾಗ ರೋಮಾಂಚನವಾಯಿತು. ಹಣ್ಣು ಹಣ್ಣು ಮುದುಕಿಯೊಬ್ಬಳು ಸುಡು ಬಿಸಿಲಿಗೆ ಕಾದ ನೆಲದ ಮೇಲೆ ಉದ್ದಕ್ಕೂ ಮೈಚಾಚಿ ನಮಸ್ಕರಿಸಿದುದನ್ನು ಗಮನಿಸಿದ ಶ್ರೀಗಳು ಮೇಲೇಳಿಸಿ ನೆಲಕಾದಿದೆ ಎಂದರು.





ಅದೊಂದು ಮರೆಯಲಾಗದ ದೃಶ್ಯ. ಮುಂದೊಂದು ಕಡೆ ಶ್ರೀಗಳವರ ಪಾದಪೂಜೆಯ ಸರಳ ಕ್ರಿಯೆ. ಒಂದೇ ಒಂದು ಜೋಪಡಿ. ನಾಲ್ಕಾರು ರಾಸುಗಳು. ಹತ್ತೆಂಟು ಮರಗಳು. ಅಲ್ಲೊಂದು ಹಸಿರುವಾಣಿ ಚಪ್ಪರ. ಮಧ್ಯೆ ಒಂದು ನಾಲ್ಕು ಕಾಲಿನ ಮಣೆ. ಹತ್ತಾರು ಭಕ್ತಾದಿಗಳು. ಮನೆ ನೋಡಾ ಬಡವರು ಮನ ನೋಡಾ ಘನ ಸಂಪನ್ನರು ಪೂಜೆ ಮುಗಿದು ಕಾರುಗಳು ಮುಂದುವರೆಸಿದವು. ಈಗ ಮೂರು ವಾಹನಗಳು. ಮುಂದೆ ಮೊದಲಿಗೆ ದೇಗುಲಮಠದ ಜೀಪು. ಅದರ ಹಿಂದೆ ಶ್ರೀಗಳವರ ಕಾರು. ಅದರ ಬೆನ್ನಿಗೆ ದೇಗುಲಮಠದ ಕಾರು. ಬೆಟ್ಟದ ದಾರಿ. ಹತ್ತು ಕಿ.ಮೀ. ದುರ್ಗಮ ಮಾರ್ಗ. ಹತ್ತುವುದು ತುಂಬಾ ಕಷ್ಟಕರ. ಸರ್ಕಾರ ಆ ಬೆಟ್ಟಕ್ಕೂ ದಾರಿ ಮಾಡಿಸಿಲ್ಲ. ಅಲ್ಲಿನ ನಿವಾಸಿಗಳೇ ತಮಗೆ ಸರಿಕಂಡಂತೆ ಕರಡು ದಾರಿ ನಿರ್ಮಾಣ ಮಾಡಿದ್ದಾರೆ. ಕಲ್ಲುಗಳನ್ನು ಕಡಿದು ಇಳಿಜಾರನ್ನು ಸರಿಪಡಿಸಿ ಕಮರಿಗಳಿಗೆ ಕಲ್ಲಿಟ್ಟು ಮಾಡಿರುವ ದಾರಿ. ಕಾಲ್ನಡಿಗೆಯಲ್ಲಿ ಹತ್ತುವುದೇ ಕಷ್ಟ. ಅಂತಹುದರಲ್ಲಿ ಕಾರುಗಳ ಪ್ರಯಾಣ. ಡ್ರೈವರುಗಳಿಗೆ ಸವಾಲು. 'ನೀನೇರಬಲ್ಲೆಯಾ ನಾನಿರುವ ಎತ್ತರಕೆ' ಎಂಬ ಸದ್ದಿಲ್ಲದ ಪ್ರಶ್ನೆ. ನಿಧಾನವಾಗಿ ಹತ್ತುತ್ತಾ ಮೇಲೇರುತ್ತಾ ಹೊರಟವು ಕಾರುಗಳು. ಜೀಪು ಸರಾಗವಾಗಿ ಹತ್ತುತ್ತಿತ್ತು. ಕಾರು ಅನುಸರಿಸುತ್ತಿತ್ತು. ಇದ್ದಕ್ಕಿದ್ದಂತೆ ಒಂದು ಘಟ್ಟದಲ್ಲಿ ಕಾರು ನಿಲ್ಲಬೇಕಾಯಿತು. ನೇರವಾಗಿ ಕಡಿದಾದ ಮಾರ್ಗ. ಕೆಳಗೆ ಉರುಳುಗಲ್ಲು ಮಿಶ್ರಿತ ಮಣ್ಣು. ಡ್ರೈವರ್ ಸೆಣಸತೊಡಗಿದ. ಮಾತು ಕೇಳಲಿಲ್ಲ ಕಾರು. ರಣರಣ ಬಿಸಿಲು, ಎಲೆ ಅಲುಗಾಡದ ಸೆಕೆಯ ಉಮ್ಮಳ, ಸುಡುವ ನೆಲ. ಶ್ರೀಗಳು ಕೆಳಗೆ ಇಳಿದು ಬೆಟ್ಟ ಹತ್ತತೊಡಗಿದರು.

ಪೂಜ್ಯರಿಗೆ ೯೪ ತುಂಬುತ್ತಿದ್ದೆಯೇ ಎಂದು ಸಂಶಯ ಬರುತ್ತಿತ್ತು ಅವರ ನಡಿಗೆ ನೋಡಿ. ಜೊತೆಗೆ ಆತಂಕ ಆವರಿಸಿ ಎದೆಯಲ್ಲಿ ನಡುಕ ಹುಟ್ಟಿತ್ತು. ಕಾಲು ಜಾರಿದರೆ, ಹಾವುಗೆ ಹಿಡಿತ ತಪ್ಪಿದರೆ, ಕೈಯ್ಯಲ್ಲಿದ್ದ ಬೆತ್ತ ಅಲುಗಾಡಿದರೆ ಗತಿಯೇನು? ಎಂಬ ತವಕ ತಲ್ಲಣ ಅಲ್ಲಿದ್ದವರಿಗೆ. ಜೋಪಾನ, ಎಚ್ಚರ, ನಿಧಾನ ಎಂಬ ಮಾತುಗಳೇ ಎಲ್ಲರಿಂದ ಹೊರ ಬರುತ್ತಿತ್ತು.

ಪೂಜ್ಯಶ್ರೀಗಳವರನ್ನು ದೇಗುಲ ಮಠದ ಕಿರಿಯ ಶ್ರೀಗಳು ಜೀಪಿನಲ್ಲಿ ಕರೆದುಕೊಂಡು ಮುಂದುವರಿದರು. ದಾರಿಯೇ ಇಲ್ಲದ ಕಡೆ ದಾರಿ ಮಾಡಿಕೊಂಡು ಬೆಟ್ಟದ ಕಿಬ್ಬಂಡೆ, ಕಿರು ದಾರಿಗಳ ನಡುವೆ ಜೀಪು ಸಾಗಿ ಮತ್ತಿಕೆರೆ ಗ್ರಾಮಕ್ಕೆ ತಲುಪಿತು. ಭಕ್ತಾದಿಗಳಿಂದ ಸ್ವಾಗತವಾಯಿತು. ಪಾದಪೂಜೆ ಮುಗಿಸಿಕೊಂಡು ಬಿಳಿಕಲ್ ಗ್ರಾಮದತ್ತ ಜೀಪು ಸಾಗಿತು. ಕಾಲ್ನಡಿಗೆಗೂ ಲಾಯಕ್ಕಿಲ್ಲದ ದಾರಿ. ಅಲ್ಲಿನ ನಿವಾಸಿಗಳಿಗೆ ಅದು ಹೆದ್ದಾರಿ. ಬಿಳಿಕಲ್‌ಗೆ ತಲುಪಿದಾಗ ಮಧ್ಯಾಹ್ನ ೧೨ ಘಂಟೆ. ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರ ನೇತೃತ್ವದಲ್ಲಿ ಸಿದ್ಧಗಂಗಾ ಪೂಜ್ಯ ಶ್ರೀಗಳವರನ್ನು ನೂತನವಾಗಿ ನಿರ್ಮಾಣ ಮಾಡಿದ ಬಸವೇಶ್ವರ ದೇವಾಲಯದ ಮುಂಭಾಗದಲ್ಲಿ ರಚಿಸಿದ್ದ ತಳಿರು ತೋರಣಗಳಿಂದ ಅಲಂಕರಿಸಿದ್ದು ಹಸಿರುಗರಿಯ ಚಪ್ಪರಕ್ಕೆ ಮೆರವಣಿಗೆಯಲ್ಲಿ ಸ್ವಾಗತಿಸಿದ ಸಂಭ್ರಮ ಕಣ್ಣಿಗೆ ಹಬ್ಬವಾಯಿತು.

ಬಿಳಿಕಲ್ಲಿನ ಬಂಧುಗಳ ಐವತ್ತು ವರ್ಷಗಳ ತಪಸ್ಸು ಫಲಿಸಿದ ಘಳಿಗೆ ಅದಾಗಿತ್ತು. ಸಿದ್ದಗಂಗಾ ಸ್ವಾಮಿಗಳನ್ನು ತಮ್ಮೂರಿಗೆ ಆಹ್ವಾನಿಸಬೇಕೆಂಬ ಸಂಕಲ್ಪ ದೇಗುಲಮಠದ ಲಿಂಗೈಕ್ಯ ಪೂಜ್ಯ ಶ್ರೀ ಮಹಾಲಿಂಗಸ್ವಾಮಿಗಳವರ ಕಾಲದಿಂದ ಬೆಳೆದು ಬಂದದ್ದು. ಶ್ರೀಮಹಾಲಿಂಗಸ್ವಾಮಿಗಳು ಕುದುರೆಯ ಮೇಲೆ ಹಲವಾರು ಸಾರಿ ಬಿಳಿಕಲ್ ಬೆಟ್ಟಕ್ಕೆ ಭಿನ್ನ-ಬಿಡುಗಡೆಗಾಗಿ ಹೋಗಿ ಬರುತ್ತಿದ್ದರು. ಅಲ್ಲಿರುವುದು ಕೇವಲ ಇಪ್ಪತ್ತೈದು ಮನೆಗಳು. ಎಲ್ಲರೂ ಕೃಷಿ ಕೃತ್ಯ ಕಾಯಕದ ಸದ್ಭಕ್ತರು . ಅಂದು ಅವರ ಸಂತೋಷಕ್ಕೆ ಎಣೆಯಿಲ್ಲ. ಮನೆಗಳೆಲ್ಲ ಮಠಗಳಾಗಿದ್ದವು. ಬಂಧು ಬಳಗವೆಲ್ಲ ಸಡಗರ ಸಂಭ್ರಮದ ನಡುವೆ ಇದ್ದರು.

ಸರ್ಕಾರಕ್ಕೆ, ಮುಖ್ಯಮಂತ್ರಿಗಳಿಗೆ, ರಾಷ್ಟ್ರಾಧ್ಯಕ್ಷರಿಗೆ, ಪ್ರಧಾನಿಗಳಿಗೆ ಪತ್ರ ಬರೆಯುವ ವ್ಯವಸ್ಥೆ ಮಾಡಬೇಕಾಗಿದೆ. ಇದೇನಿದು, ಸ್ವಾತಂತ್ರ್ಯ ಬಂದು ೫೩ ವರ್ಷಗಳು ಕಳೆದರೂ ಈ ಗ್ರಾಮಕ್ಕೆ ಒಂದು ರಸ್ತೆಯಿಲ್ಲ, ಗ್ರಾಮ ಬಂಧುಗಳು ಏನು ಮಾಡುತ್ತಿದ್ದೀರಿ. ನಿಮ್ಮ ಶಕ್ತಿ ಪ್ರದರ್ಶನ ಮಾಡಬೇಕು. ಜನಪ್ರತಿನಿಧಿಗಳು ಮತದಾನಕ್ಕೆ ಬಂದರೆ ಸಾಕೆ? ಜನರ ಸುಖ,

ದುಃಖ ನೋವುಗಳ ಅರಿವು ಅವರಿಗೆ ಬೇಡವೆ, ರೋಗ ರುಜಿನಗಳಾದರೆ ಹತ್ತು ಕಿ.ಮೀ. ಇಳಿದು ಊರಿಗಂಗೆ ಹೋಗಬೇಕೆ? ಪ್ರಾಥಮಿಕ ಅಗತ್ಯಗಳಿಗಾದರೂ ಸ್ಪಂದಿಸದೇ ಹೋದರೆ ಪ್ರಜಾಪ್ರಭುತ್ವಕ್ಕೆ ಅರ್ಥ ಬರುವುದಾದರೂ ಹೇಗೆ? ಎಂದು ಆಶೀರ್ವಚನ ಪ್ರಾರಂಭಿಸಿದ ಶ್ರೀಗಳ ಎಪ್ಪತ್ತೆರಡು ನಿಮಿಷ ಸುದೀರ್ಘವಾಗಿ ಬಸವಣ್ಣ ಮಾಡಿದ ಸಮಗ್ರ ಜೀವನ ಕ್ರಾಂತಿಯನ್ನು ಎಳೆ ಎಳೆಯಾಗಿ ವಚನಗಳ ಉದಾಹರಣೆಗಳ ಮೂಲಕ ಸಭಿಕರಿಗೆ ಪರಿಚಯಿಸಿದ ಸಂದರ್ಭ ಎತ್ತರಕ್ಕೇರ ಬೇಕು ಜೀವನದಲ್ಲಿ ಎನ್ನುವಂತಿತ್ತು. ಬೆಟ್ಟದ ನೆತ್ತಿಯಲ್ಲಿ ಶ್ರೀಗಳಾಡಿದ ನುಡಿಗಳು ಎತ್ತರವಾಗಿದ್ದವು, ಹತ್ತಿರಕ್ಕೆ ಕರೆದು ಕೊಳ್ಳುವಂತಿದ್ದವು. ಶ್ರೀಗಳವರೆಂದರು - ಬಸವಣ್ಣ ದಾರ್ಶನಿಕ, ಸಂಸಾರ ಯೋಗಿ, ರಾಜಕೀಯ ಮುತ್ಸದ್ದಿ, ಸಮಾಜ ವಿಜ್ಞಾನಿ, ಆರ್ಥಿಕ ತಜ್ಞ, ಲೋಕ ಶಿಕ್ಷಕ, ಆರ್ತರ ಆಶಾಕಿರಣ, ಬಡವರ ಬಂಧು, ದಲಿತರ ದಯಾಳು, ದೀನರ ದೀಪಕ, ಮಹಿಳೆಯರ ಉದ್ಧಾರಕ, ಅಪರೂಪದ ಪ್ರಜಾಪ್ರಭುತ್ವ ಪ್ರೇಮಿ, ಕಾಯಕದ ಕಲಿ, ದಾಸೋಹದ ದ್ರಷ್ಟಾರ, ಮಾನವತೆಯ ಮಂಗಳಮೂರ್ತಿ. ಜಗತ್ತಿಗೆಲ್ಲ ಧರ್ಮದೀಪಕರ, ದಾರ್ಶನಿಕರ, ಸಾಧುಗಳ, ಸಂತರ, ವಿಚಾರವಂತರ ತತ್ವಾದರ್ಶಗಳನ್ನು ಅಳಡಿಸಿಕೊಂಡ ಅಪೂರ್ವ ಸೃಷ್ಟಿ ಅವರು ಎಂದಾಗ ಸಭೆ ಮಂತ್ರಮುಗ್ಧವಾಗಿ ಕಿವಿಗೊಟ್ಟಿತ್ತು.

ಮರಳೆಗವಿಮಠದ ಪೂಜ್ಯಶ್ರೀ ಕಾಲಾಗ್ನಿ ರುದ್ರಮುನಿ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿದ್ದ ಸಮಾರಂಭ ವನ್ನು ದೇಗುಲ ಮಠದ ಪೂಜ್ಯಶ್ರೀಗಳಾದ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಉದ್ಘಾಟಿಸಿದರು. ಸಮಾರಂಭದಲ್ಲಿ ಶ್ರೀ ಎಸ್.ಪಿ. ಶಿವಶಂಕರ್ ಮತ್ತು ಶ್ರೀ ಹೆಚ್.ಪಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.

ಸಮಾರಂಭದ ನಂತರ ಪ್ರಯಾಣ ಬೆಳೆಸಿದಾಗ ಬೆಟ್ಟದ ಮಧ್ಯದಲ್ಲಿ ಕಂಸಾಳೆಯ ಮಧುರನಾದ ಅಲೆಅಲೆ ಯಾಗಿ ತೇಲಿಬರುತ್ತಿತ್ತು. ಸೋಲಿಗರು ಪೂಜ್ಯಶ್ರೀಗಳವರನ್ನು ತಮ್ಮ ವಾಸಸ್ಥಳಕ್ಕೆ "ಇಳಿದಾರು ಇಳಿದಾರು ಮಾದೇವರು, ಗಿರಿಯನಿಳಿದಾರು ಮಾದೇವರು' ಎಂದು ಹಾಡುತ್ತಾ ಉಘೇ ಅನ್ನಿರಪ್ಪೋ ಸ್ವಾಮಿ ಮಾದೇವಗೆ, ಸಿದ್ಧಗಂಗೆಯ ಶ್ರೀ ದೇವರಿಗೆ ಎಂದು ಜಯಘೋಷ ಮಾಡಿದುದನ್ನು ಕೇಳಿದಾಗ ಹೃದಯ ತುಂಬಿ ಬಂದಿತ್ತು. ಸೋಲಿಗ ಬಂಧುಗಳು ಬೆಟ್ಟದ ಮಕ್ಕಳು, ಮುಗ್ಧರು, ಮಹದೇಶ್ವರನ ಭಕ್ತರು. ಜಂಗಮರನ್ನು ಕಂಡಾಗ ಭಾವಾವೇಶಭರಿತರಾಗಿ ಹಾಡುತ್ತ ಕುಣಿಯುವ ಕಂಸಾಳೆ ನುಡಿಸುವ ಕಲಾವಿದರು. ಅಲ್ಲಿ ಪಾದಪೂಜೆ ಸ್ವೀಕರಿಸಿದ ಶ್ರೀಗಳು ಶ್ರೀಮಠದತ್ತ ಪ್ರಯಾಣಾಭಿಮುಖ ವಾದಾಗ ಸಂಜೆ ಐದೂವರೆಯಾಗಿತ್ತು. ತುಂಬಾ ಕಡಿದಾದ ಇಳಿಜಾರಿನ ಹಾದಿಯನ್ನು ಅತಿ ಎಚ್ಚರಿಕೆಯಿಂದ ಇಳಿಯ ಬೇಕಾಯ್ತು. ಕಾರು ಊರಿಗಂ ಮುಟ್ಟಿದಾಗ ಆರೂವರೆ ಯಾಗಿತ್ತು. ಕನಕಪುರದ ಮಾರ್ಗದಲ್ಲಿ ಹುಣಸನಹಳ್ಳಿ ದೇಗುಲಮಠದ ಪದವಿಪೂರ್ವ ಕಾಲೇಜಿನಲ್ಲಿ ಹತ್ತು ನಿಮಿಷ ನಿಂತಿದ್ದು ಮುಂದುವರೆದೆವು. ಶ್ರೀಗಳವರು ಕಾರಿನಲ್ಲಿಯೂ ಹೇಳುತ್ತಲೇ ಬಂದರು. ಸಪ್ಪಣ್ಣಪ್ಪನವರ (ಸರ್ಪಭೂಷಣ ಶಿವಯೋಗಿ) ಕೀರ್ತನೆಗಳನ್ನು - "ಪರನಿಂದೆಗಳನಾಲಿಸದಿರು ವನೆ ದೇವರ ದೇವ....ಇತರರರ್ಥಕೆ ಕರಮನವನಿಡದಿರು ವವನೆ ದೇವರ ದೇವ', "ಅವರವರಿಗವರೊಲಿದುದೇಬ್ರಹ್ಮ, ಚೋರರಿಗೆ ಕಳ್ಳತನವೇ ಬ್ರಹ್ಮ' ಮುಂತಾದವುಗಳನ್ನು ಇಂಪಾಗಿ ಹಾಡುತ್ತಾ ಅವುಗಳ ಅಂತರಾರ್ಥವನ್ನು ವಿವರಿಸುತ್ತಾ- "ಇತ್ತೀಚಿಗೆ ಯಾರೂ ಇವುಗಳನ್ನು ಸರಿಯಾಗಿ ಅಭ್ಯಾಸ ಮಾಡುತ್ತಿಲ್ಲ. ಸ್ವಾಮಿಗಳಾದವರೂ ಪೂಜಾನಿಷ್ಠೆಯ್ನನು ಬೆಳೆಸಿಕೊಳ್ಳುತ್ತಿಲ್ಲ' ಎಂದು ತಮ್ಮ ನೋವನ್ನು ವ್ಯಕ್ತಪಡಿಸಿ ದಾಗ ದೇಗುಲಮಠದ ಪೂಜ್ಯರು ಸಮ್ಮತಿಸಿದರು. ಬೆಂಗಳೂರನ್ನು ದಾಟಿ ಶ್ರೀಮಠದ ಕಡೆಗೆ ಕಾರು ಚಲಿಸುತ್ತಿತ್ತು. ಬೆಳಗ್ಗೆ ಏಳಕ್ಕೆ ಸರಿಯಾಗಿ ಕರಡಿಗವಿಮಠಕ್ಕೆ ಹೊರಡಬೇಕು ಎಂದರು. ನಾಟಕದ ಪಾತ್ರಧಾರಿಗಳ ಶ್ರದ್ಧೆ, ನಿಷ್ಠೆಗಳ ಬಗ್ಗೆ ಮೆಚ್ಚುಗೆ ಸೂಚಿಸಿದರು.

ಶ್ರೀಮಠಕ್ಕೆ ಬಂದಾಗ ರಾತ್ರಿ ಹನ್ನೊಂದೂವರೆ ಯಾಗಿತ್ತು. ಮಠದಿಂದ ಬಿಳಿಕಲ್ ಬೆಟ್ಟದ ಪ್ರವಾಸ ಅವಿಸ್ಮರಣೀಯವಾಯಿತು. ಅದೂ ಶ್ರೀಗಳವರ ೯೪ನೆಯ ವಯಸ್ಸಿನಲ್ಲಿ-ಬೆಟ್ಟ ಹತ್ತಿದ್ದು ಮರೆಯಲಾಗದ ಅನುಭವ ವಾಯಿತು.







# ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ

– ಎಂ. ರವೀಂದ್ರ

ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ – ಇವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಶಿಕ್ಷಣವು ಪ್ರತಿಯೊಂದು ಮಾನವ ಸಮಾಜದ ಮೂಲಭೂತ ಚಟುವಟಿಕೆಯಾಗದೆ, ಶಿಕ್ಷಣದ ಮೂಲಕ ಸಮಾಜವು ತನ್ನ ಪರಂಪರೆ, ಸಂಸ್ಕೃತಿ ಮುಂತಾದವುಗಳನ್ನು ಹಿರಿಯರಿಂದ ಕಿರಿಯರಿಗೆ ಔಪಚಾರಿಕವಾಗಿ ಮತ್ತು ಅನೌಪಚಾರಿವಾಗಿ ಸಾಗಿಸುತ್ತದೆ. ಸಾಮೂಹಿಕ ಜೀವನದ ಪಾಠಗಳು ವ್ಯಕ್ತಿಯು ಸಮಾಜಜೀವಿ ಯಾಗಿ ಬಾಳಲು ಮಾಗದರ್ಶನವನ್ನು ನೀಡುತ್ತವೆ. "Education is a process which changes animal being." ಹೀಗೆ ವ್ಯಕ್ತಿಯ ಚಾರಿತ್ರ್ಯ, ವ್ಯಕ್ತಿತ್ವ, ಸಂಸ್ಕೃತಿ, ವಿವೇಚನೆ, ನೈಪುಣ್ಯತೆ ಮೊದಲಾದ ಮಾನವಜೀವನಕ್ಕೆ ಸಂಬಂಧಿಸಿದ ಅಂಶಗಳು ಶಿಕ್ಷಣವನ್ನೇ ಅವಲಂಬಿಸುತ್ತವೆ.

ಹಾಗೆಯೇ ಸಮಾಜದಲ್ಲಿನ ಅನೇಕ ಬದಲಾವಣೆಗಳೂ ಸಹ ಶಿಕ್ಷಣಪದ್ಧತಿಯಲ್ಲಿ ಬದಲಾವಣೆಯನ್ನು ತರುತ್ತವೆ. ಸಾಮಾಜಿಕ ಬದಲಾವಣೆಯನ್ನು ತಿಳಿಯಲು ಶಿಕ್ಷಣ ಪದ್ಧತಿಯಲ್ಲಿ, ವಿಧಾನಗಳಲ್ಲಿ ಹೊಸ ಹೊಸ ಸಂಶೋಧನೆಗಳನ್ನು ಮಾಡಬೇಕಾಗುತ್ತದೆ. ಶಿಕ್ಷಣ ಹಾಗೂ ಸಾಮಾಜಿಕ ಪರಿವರ್ತನೆಯ ನಡುವಿನ ಸಂಬಂಧವನ್ನು ತಿಳಿಯಬೇಕಾದರೆ ಈ ಎರಡೂ ಅಂಶಗಳನ್ನು ಅಧ್ಯಯನ ಮಾಡುವುದು ಸೂಕ್ತ.

ಆಂಗ್ಲಶಬ್ದವಾದ Education ಎಂಬ ಪದ ವಿವಿಧ ರೀತಿಯ ಅರ್ಥಗಳನ್ನು ಹೊಂದಿದೆ. ಕೆಲವರ ಪ್ರಕಾರ ಲ್ಯಾಟಿನ್ ಪದದ Educareದಿಂದ to rear, to nourish or to bring up, to lead out, to extract – ಅಂದರೆ ಪೋಷಿಸು, ಮೇಲಕೆತ್ತು, ಹೊರದೆಗೆ ಎಂಬ ಅರ್ಥ ಏರ್ಪಟ್ಟಿದೆ. ಮಗುವಿನ ಸುಪ್ತಶಕ್ತಿಗಳನ್ನು ಗುರುತಿಸಿ ಶೋಧಿಸಿ ಅಭಿವೃದ್ಧಿಪಡಿಸು ಎಂಬ ಈ ಪದ ಸೃಷ್ಟಿಯಾಗಿದೆ.

ಪ್ರಾಚೀನ ಭಾರತೀಯ ಶಿಕ್ಷಣ ಪರಂಪರೆಯ ನಮ್ಮ ಪ್ರಾಚೀನರೂ, ಶಬ್ದಶಾಸ್ತ್ರಪರಿಣತರೂ, ಪ್ರಕಾಂಡ ಪಂಡಿತರೂ ವಿಷಯವನ್ನು ಸೈದ್ಧಾಂತಿಕವಾಗಿ ಇದಮಿತ್ಥಂ ಎಂದು ಸ್ಪಷ್ಟಪಡಿಸುವ ಶಕ್ತಿಯುಳ್ಳವರೂ ಆಗಿದ್ದರು. ಅವರು ಪಾಶ್ಚಿಮಾತ್ಯ ವಿದ್ವಾಂಸರಿಗಿಂತ ಯಾವುದರಲ್ಲೂ ಕಡಿಮೆಯಾಗಿರಲಿಲ್ಲ. ಸುಪ್ರಸಿದ್ಧ ವೈಯ್ಯಾಕರಣಿ ಪಾಣಿನಿ ತಮ್ಮ ಧಾತು ಪಾಠದಲ್ಲಿ 'ಶಿಕ್ಷಾ-ವಿದ್ಯೋಪಾಸನೆ' ಎಂದಿದ್ದಾರೆ. ವಿದ್ಯೆ ಎಲ್ಲರಿಗೂ ಅನುಭವ ವೇದ್ಯ.

ಅನೇಕ ಶಿಕ್ಷಣತಜ್ಞರು ಶಿಕ್ಷಣದ ಅರ್ಥವನ್ನು ಕೆಳಕಂಡಂತೆ ಅರ್ಥೈಸಿದ್ದಾರೆ :

★ ವ್ಯಕ್ತಿಯನ್ನು ಸ್ವಾವಲಂಬಿಯನ್ನಾಗಿಯೂ ನಿಸ್ವಾರ್ಥಿ ಯನ್ನಾಗಿಯೂ ಮಾಡುವುದೇ ಶಿಕ್ಷಣ. – **ಋಗ್ವೇದ**

★ ಸ್ವಾ ವಿದ್ಯಾಯಾ ವಿಮುಕ್ತಯೇ – **ಉಪನಿಷತ್ತುಗಳು**

★ ಶಿಕ್ಷಣ ಸಚ್ಚಾರಿತ್ರಾಭಿವೃದ್ಧಿಯ, ವ್ಯಕ್ತಿಯ ಉಪಯುಕ್ತತೆಯ ಸಾಧನ – **ಯಾಜ್ಞವಲ್ಕ್ಯ**

★ ಪ್ರಕೃತಿಯ ಪ್ರಸಾದಗಳ ಪರಿಚಯ ಪಡೆಯುವ ತರಬೇತಿ ಶಿಕ್ಷಣ – **ಪಾಣಿನಿ**

★ ಆತ್ಮ ಸಾಕ್ಷಾತ್ಕಾರವೇ ಶಿಕ್ಷಣ – **ಶಂಕರಾಚಾರ್ಯ**

★ ಸತ್ಯ, ಸೌಂದರ್ಯ, ಸಭ್ಯತೆಗಳ ಪ್ರಭೆಯೇ ಶಿಕ್ಷಣ – **ಮಹಾತ್ಮ ಗಾಂಧೀಜಿ**

★ ಮಕ್ಕಳು ಮಾನವರಾಗಿ, ನಾಗರಿಕರಾಗಿ ಇತರರೊಂದಿಗೆ ಗೌರವ ಘನತೆಯಿಂದ ವರ್ತಿಸುವಂತೆ ಮಾಡುವುದೇ ಶಿಕ್ಷಣ – **ಡಾ. ಎಸ್. ರಾಧಾಕೃಷ್ಣನ್**

★ ಸದೃಢ ದೇಹದಲ್ಲಿ ಸಬಲ ಮನಸ್ಸನ್ನುಂಟು ಮಾಡುವುದೇ ಶಿಕ್ಷಣ – **ಅರಿಸ್ಟಾಟಲ್**

★ ಮಾನವ ಸುಪ್ತಶಕ್ತಿಗಳ ಸ್ವಾಭಾವಿಕ ಸಮಗ್ರ ಅಭಿವೃದ್ಧಿಯೇ ಶಿಕ್ಷಣ – **ಪೆಸ್ಟಾಲಜಿ**

★ ಆಂತರಿಕವಾಗಿರುವುದನ್ನು ಹೊರಪಡಿಸಿ ಬಾಹ್ಯಜಗತ್ತಿನ ಸಂಬಂಧ ಪಡೆಯುವಂತೆ ಮಾಡುವುದೇ ಶಿಕ್ಷಣ – **ಫ್ರೊಬೆಲ್**.

ಭಾರತೀಯ ಶಿಕ್ಷಣ ಆಯೋಗವು (೧೯೬೪-೬೬) "ಜನತೆಯ ಜೀವನದ ಅಗತ್ಯತೆ ಹಾಗೂ ಆಕಾಂಕ್ಷೆಗಳಿಗೆ ಅನುಗುಣವಾಗಿ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಬದಲಾವಣೆಯ ಬಲಿಷ್ಠಸಾಧನವೇ ಶಿಕ್ಷಣ" ಎಂದು ಹೇಳಿದೆ.

ಶಿಕ್ಷಣವೆಂದರೆ ವಿಷಯ ವಿವರಣೆ, ನಿರ್ದಿಷ್ಟ ಬೋಧನೆ, ಕೆಲವು ಓದುಬರಹ ಲೆಕ್ಕಗಳಿಗೆ ಸೀಮಿತವಾದದ್ದು ಜ್ಞಾನ ಸಂವಹಣೆ ಅಥವಾ ಕೇವಲ ಕೆಲವು ಉಪಯುಕ್ತ ಜೀವನ ಕೌಶಲಗಳ ಗಳಿಕೆಗೆ ಸೀಮಿತವಾದ ವಿದ್ಯೆಯನ್ನು ಪಡೆಯವು ದಾಗಿದೆ. ಶಿಕ್ಷಣ ಸಂಸ್ಥೆಗಳಲ್ಲಿ, ಶಾಲಾ ಕಾಲೇಜುಗಳಲ್ಲಿ ಶಿಕ್ಷಕರ ಪಾಠ ಪ್ರವಚನಗಳಿಂದ, ಪಠ್ಯಕ್ರಮದಿಂದ, ಪುಸ್ತಕದಿಂದ ಪಡೆಯುವ ಜ್ಞಾನವಾಗಿರುತ್ತದೆ. ಆದರೆ ವಿಶಾಲಾರ್ಥದಲ್ಲಿ ಶಿಕ್ಷಣವೆಂದರೆ ಮಗುವಿನ ಬೌದ್ಧಿಕ, ದೈಹಿಕ, ಕಲಾತ್ಮಕ, ನೈತಿಕ, ಆಧ್ಯಾತ್ಮಿಕ, ವೈಜ್ಞಾನಿಕ ಮುಂತಾದ ಸರ್ವಮುಖಿಗಳ ಸರ್ವತೋಮುಖಿ ಅಭಿವೃದ್ಧಿ.

ಹುಟ್ಟಿದಂದಿನಿಂದ ಸಾಯುವವರೆಗಿನ ಪ್ರತಿಯೊಂದು ಚಟುವಟಿಕೆ ಹಾಗೂ ಅನುಭವವೂ ಶಿಕ್ಷಣವೇ ಆಗಿದೆ. ಆಹಾರ, ನಿದ್ರೆ, ಭಯ, ಕಾಮಪ್ರವೃತ್ತಿಗಳು, ಪ್ರಾಣಿಗಳಿಗೂ ಮಾನವನಿಗೂ ಸಮಾನವಾದದ್ದು. ಆದರೆ ಮಾನವರಲ್ಲಿ 'ಧರ್ಮ' ಎಂಬುದು ಪ್ರಧಾನ ಪಾತ್ರ ವಹಿಸುತ್ತದೆ. ಈ ಧರ್ಮಪ್ರಜ್ಞೆಯ ಫಲವಾಗಿ ಮಾನವರಲ್ಲಿ ಯುಕ್ತಾಯುಕ್ತ ವಿವೇಚನೆ, ಸರಿತಪ್ಪುಗಳ ತಿಳವಳಿಕೆ ಉಂಟಾಗುತ್ತದೆ. ಈ ಧರ್ಮಪ್ರಜ್ಞೆಗೆ ಪೋಷಕ ಸಾಧನವಾಗಿರು ವಂತಹದ್ದೇ ಶಿಕ್ಷಣ.

ಮಾನವರಲ್ಲಿ ಕೆಲವು ಸಾಮರ್ಥ್ಯಗಳು ಇವೆ. ತನ್ನ ಪೂರ್ವಜರ ಅನುಭವ ಪ್ರಸಾದದಿಂದ ಸಂಘಸಂಸ್ಥೆಗಳು, ಗುಡಿಗೋಪುರಗಳು, ಆಚಾರ ವ್ಯವಹಾರಗಳು, ಸಂಸ್ಕೃತಿ ನಾಗರಿಕತೆಗಳು ವಿವಿಧ ರೀತಿಯಲ್ಲಿ ಮಾನವನಿಗೆ ಕರಗತ ವಾಗಿವೆ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜೀವನಾನುಭವಗಳ ಜೊತೆಗೆ ಪೂರ್ವಜರ ಅನುಭವಾಮೃತ ಪ್ರಸಾದವನ್ನು ಪಡೆಯುತ್ತಾನೆ. ಸನ್ನಿವೇಶಕ್ಕೆ ತಕ್ಕಂತೆ ಪರಿವರ್ತಿತನಾಗುತ್ತಾನೆ. ಪರಿವರ್ತಿತ ಅನುಭವಗಳಿಗೆ ಅನುಗುಣವಾಗಿ ನೂತನದೃಷ್ಟಿ ಏರ್ಪಡುತ್ತದೆ. ಹೀಗೆ ವ್ಯಕ್ತಿಯು ಸತತ ಸ್ವಪ್ರಯತ್ನದಿಂದ ಸಂಶೋಧಿಸಿ ಶೇಖರಿಸುವ ಏಕಪ್ರಕಾರವಾಗಿ ಹರಿದು ಬಂದಿರುವ ಜೀವನಾನುಭವಗಳ ಅಮರಗಂಗೆಯೇ ಶಿಕ್ಷಣ. ಶಿಕ್ಷಣ ಎಂಬುದು ಎಂದೂ ಅಳಿಯದ ಅಕ್ಷಯಪಾತ್ರೆ, ಒಟ್ಟಿನಲ್ಲಿ ಶಿಕ್ಷಣವೆಂದರೆ ದೃಷ್ಟಿ ವೈಶಾಲ್ಯತೆಯನ್ನುಂಟು ಮಾಡುವ, ಒಳನೋಟವನ್ನು ಹೆಚ್ಚಿಸುವ, ಜ್ಞಾನದ ಕ್ಷಿತಿಜವನ್ನು ವಿಸ್ತೃತಗೊಳಿಸುವ, ವಿವೇಚನೆಯನ್ನು ಜಾಗೃತಗೊಳಿಸುವ, ಪ್ರಕ್ರಿಯೆಗಳನ್ನು ಪರಿಶುದ್ಧಗೊಳಿಸುವ ವಿಚಾರ ಹಾಗೂ ಭಾವನೆಗಳನ್ನು ಪ್ರಚೋದಿಸುವ ಕ್ರಿಯೆಯಾಗಿದೆ.

ಅದರಂತೆ ಸಮಾಜವು ನಿರಂತರವಾಗಿ ಬದಲಾವಣೆಗೆ ಒಳಗಾಗವಂತಹ ಆಯಾಮವಾಗಿದೆ. ಅದು ನಿಂತ ನೀರಿನಂತೆ ಸ್ತಬ್ಧವಾಗಿರದೆ ಸದಾಕಾಲದಲ್ಲಿಯೂ ಪರಿವರ್ತನೆ ಹೊಂದುತ್ತಿರುವುದು ಅದರ ಲಕ್ಷಣ. ಇಂತಹ ಸಮಾಜದ ಬದಲಾವಣೆಗಳು ನಮ್ಮ ಕಣ್ಣಿಗೆ ಗೋಚರಿಸುವುದು ಈ ಸಾಮಾಜಿಕ ಬದಲಾವಣೆ–ಸಾಮಾಜಿಕ ಸಂಬಂಧಗಳಲ್ಲಿ ಆಗುವ ಬದಲಾವಣೆ ಎನಿಸಿದ್ದು ಎಲ್ಲಾ ಬದಲಾವಣೆಗಳು ಸರ್ವ ವ್ಯಾಪಕವಾಗಿವೆ.

ಸಾಮಾಜಿಕ ಬದಲಾವಣೆಯು ಮಾನವನ ಜೀವನದ ಪರಿಸ್ಥಿತಿಗಳ ಮೇಲೆ ನಿಯಂತ್ರಣವನ್ನು ಹೆಚ್ಚು ಹೆಚ್ಚಾಗಿ ಸ್ಥಾಪಿಸುತ್ತಾ ಬಂದಿದ್ದು ಆತನ ನೈಸರ್ಗಿಕ ವಾತಾವರಣ, ಪರಸ್ಪರ ಮನೋಭಾವ, ಬೆಳವಣಿಗೆ, ಸಹಕಾರ, ಸ್ವಾತಂತ್ರ್ಯ ಮುಂತಾದವುಗಳ ಮೇಲೆ ಪ್ರಭಾವ ಬೀರುವುದು.

ಯಾವುದೇ ದೇಶವಾಗಿರಲಿ, ಯಾವುದೇ ಕಾಲವಾಗಿರಲಿ ಮಾನವ ಸಮಾಜವು ಬದಲಾವಣೆ ಸಿಕ್ಕಿಕೊಂಡೇ ಇರುತ್ತದೆ. ಬದಲಾವಣೆಯ ಗತಿಯಲ್ಲಿ ವ್ಯತ್ಯಾಸವಿರಬಹುದು. ಆದರೆ ಬದಲಾವಣೆಯು ನಡೆಯಲೇಬೇಕಾದ ಕ್ರಿಯೆ. ಸಮಾಜ ಜೀವಿಯಾದ ಮಾನವ ತನ್ನ ಹೊಂದಾಣಿಕೆಯ ಸ್ವಭಾವ. ಪರಸ್ಪರಾವಲಂಬನೆಯ ತತ್ವಪಾಲನೆ, ನವನವೀನ ಮೌಲ್ಯ ಮಂಡನೆ, ಪಡೆದ ಸೌಕರ್ಯಗಳಿಂದ ಪ್ರಭಾವಿತನಾಗಿ ಹಳೆಯದು ಬದಲಾಗಿ ಹೊಸದಕ್ಕೆ ಜಾಗ ಮಾಡಿಕೊಡುತ್ತದೆ ಎಂಬ ಹೇಳಿಕೆಯ ಹಿನ್ನೆಲೆಯಲ್ಲಿ ಸಮಾಜವು ಬದಲಾಗುತ್ತಿದೆ.

ಸಾಮಾಜಿಕ ಬದಲಾವಣೆಯು ಅರ್ಥತಜ್ಞರು ಕಂಡಂತೆ ಹೀಗಿವೆ :

★ ಜನರ ವಿಚಾರ ಮತ್ತು ಕಾರ್ಯಗಳಲ್ಲಾಗುವ ಪರಿವರ್ತನೆ

– ಜಾನ್ಸನ್

★ ಸಾಮಾಜಿಕ ಸಂಬಂಧಗಳಲ್ಲಾಗುವ ಮಾರ್ಪಾಡು

– ಮೆಕ್ಕಿವರ್ ಮತ್ತು ಪೇಜ್

★ ಸಾಮಾಜಿಕ ಸಂಘಟನೆ, ರಚನೆ ಮತ್ತು ಕಾರ್ಯಗಳಲ್ಲಾಗುವ ಬದಾಲವಣೆ

– ಡೇವಿಸ್

★ ಜೀವನದ ವಿವಿಧ ಹಂತಗಳು, ಹಂತಗಳಲ್ಲಿಯ ವಿವಿಧ ತತ್ವಗಳು ಹಾಗೂ ಮಾನವನ ಜೀವನದ ಮೇಲೆ ಪ್ರಭಾವ ಬೀರುವ ಅಂಶಗಳೇ ಸಾಮಾಜಿಕ ಪರಿವರ್ತನೆ

– ಅಗಸ್ಟ್‌ಕಾಮ್ಟೆ

★ ಸಾಂಪ್ರದಾಯಕವಾಗಿ ಬಂದಂತಹ ಮಾನವ ಸಂಬಂಧಗಳಲ್ಲಿ ಹಾಗೂ ರೀತಿ ನೀತಿಗಳ ಮಟ್ಟದಲ್ಲಿ ಉಂಟಾದ ಯಾವುದೇ ಬಗೆಯ ಬದಲಾವಣೆ ಸಾಮಾಜಿಕ ಬದಲಾವಣೆ

– ಲುಂಡ್‌ಬರ್ಗ್.





ಹೀಗೆ ಸಮಾಜದಲ್ಲಿ ಎದ್ದುತೋರುವ ಆಂತರಿಕ ಬದಲಾವಣೆಯ ಮತ್ತು ಸಾಮಾಜಿಕ ಬಾಂಧವ್ಯ ಹಾಗೂ ಸಾಮಾಜಿಕ ರಚನೆಯಲ್ಲುಂಟಾದ ವ್ಯತ್ಯಾಸಗಳಿಗೆ ಸಾಮಾಜಿಕ ಬದಲಾವಣೆ ಎನ್ನಬಹುದು. ಸಾಮಾಜಿಕ ಬದಲಾವಣೆಯು ಸಮಾಜದ ಸ್ವರೂಪ, ಸಾಮಾಜಿಕ ಸಂಸ್ಥೆಗಳು ಹಾಗೂ ಅವುಗಳ ಕಾರ್ಯದಲ್ಲಾದ ಬದಲಾವಣೆಯಾಗಿದೆ. ಅಲ್ಲದೆ ಸಮಾಜದ ರಚನೆಯಲ್ಲಿ ಜನತೆಯ ಆಲೋಚನೆ, ಸಂಸ್ಕೃತಿ, ಅಭಿರುಚಿ, ಮೌಲ್ಯ, ಹವ್ಯಾಸ, ನೀತಿಗಳು, ಜೀವಿಸುವ ರೀತಿ, ಇತ್ಯಾದಿಗಳ ಹೊಸತನವನ್ನು ತಿಳಿಸುವ ನಿರ್ದಿಷ್ಟ ಕಾಲಾವಧಿಯಲ್ಲಿ ಸಮಾಜದ ಕಾರ್ಯಾಚರಣೆಯಲ್ಲಿ ಉಂಟಾಗುವ ಬದಲಾವಣೆಯಾಗಿದೆ. ಸಾಮಾಜಿಕ ಬದಲಾವಣೆಯು ರೇಖಾಮುಖಿ (linear), ಆವರ್ತನಾಶೀಲ (cyclical) ಎನಿಸಿದ್ದು ಸಂಬಂಧಿತ ರಚನೆಯಲ್ಲಿ ಬದಲಾವಣೆ ಬಿತ್ತುವ, ಬೆಳೆಸುವ, ಒಕ್ಕುವ ಕಾರ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಪ್ರಕ್ರಿಯೆಯೆನಿಸಿದೆ.

ಈ ಸಾಮಾಜಿಕ ಬದಲಾವಣೆಯನ್ನು ಮುಖ್ಯವಾಗಿ ಕಲೆ, ಭಾಷೆ, ಸಂಸ್ಕೃತಿ, ತಾಂತ್ರಿಕತೆ, ಜನತೆಯ ಆಲೋಚನೆ, ಅಭಿರುಚಿ, ಮೌಲ್ಯ, ಹವ್ಯಾಸ, ನೀತಿ, ಜೀವಿಸುವ ರೀತಿ, ಮುಂತಾದವುಗಳಲ್ಲಿ ಕಾಣಬಹುದಾಗಿದೆ.

ಸಮಾಜ ಮತ್ತು ಶಿಕ್ಷಣ ಎರಡೂ ಸಹ ನಿರಂತರ ಬದಲಾವಣೆಯನ್ನು ಹೊಂದುತ್ತಿರುವ ಅಂಶಗಳು. ಶಿಕ್ಷಣವು ಯುವಜನಾಂಗದ ವರ್ತನೆ ಹಾಗೂ ಆಲೋಚನಗಳ ನಮೂನೆಗಳೊಂದಿಗೆ ಸಂಪರ್ಕ ಪಡೆದಿದ್ದು, ಸಾಮಾಜಿಕ ಬದಲಾವಣೆಯು ಸಶಕ್ತಿದಾಯಕ ಸಾಧನವಾಗಿ ಕಾರ್ಯ ನಿರ್ವಹಿಸುತ್ತಿದೆ. ಶಿಕ್ಷಣವು ಹೊಸ ಹೊಸ ವಿಷಯಗಳನ್ನೂ, ಪ್ರಬುದ್ಧ ಪ್ರಜ್ಞೆಯನ್ನೂ, ಉದಾತ್ತ ಆದರ್ಶತತ್ವ ಆಲೋಚನೆಯನ್ನು ಮಕ್ಕಳಲ್ಲಿ ಉಂಟುಮಾಡಿ ಸಾಮಾಜಿಕ ಬದಲಾವಣೆಯಡಿ ನವನವೋನ್ಮೇಶಶಾಲಿ ಪ್ರತಿಭೆಯ ಫಲವಾಗಿ ಪರೋಕ್ಷವಾಗಿ ಮಕ್ಕಳ ಮನೋಭಾವ, ಮೌಲ್ಯ, ಅಭಿರುಚಿಗಳನ್ನು ಬದಲಾಯಿಸುವ ಉಪಯುಕ್ತ ಸಾಧನವಾಗಿದೆ. ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದಂತೆ (ಸಮಾಜದ ಆಚಾರ ವಿಚಾರ, ಸಾಂಸ್ಕೃತಿಕ ರೂಢಿಗಳ ಬದಲಾವಣೆ) – ಶಿಕ್ಷಣದ ಕ್ಷೇತ್ರದಲ್ಲಿ ಹಾಗೂ ಶಿಕ್ಷಣ ಸಂಸ್ಥೆಗಳಲ್ಲಿ ಮಕ್ಕಳ ಆಲೋಚನಾ ವಿಧಾನಗಳು, ಬದಲಾದ ಮೌಲ್ಯಗಳು, ನೀತಿ ನಿಯಮಗಳು, ಪಡಿಯಚ್ಚುಗಳು, ವಿಷಯಗಳು, ಚರ್ವಿತ ಚರ್ವಣಾಂಶಗಳು, ನಿಷೇದ ಹಾಗೂ ಪವಿತ್ರ ವಿಷಯಗಳು, ಯುಕ್ತಾಯುಕ್ತವಾದ ವಿವೇಚನೆಗಳು ಅಭಿವೃದ್ಧಿಗೊಳ್ಳುತ್ತವೆ.

★ ಶಾಲಾ ವ್ಯಾಸಂಗ ಕಾಲದಲ್ಲಿ ಅಭಿವೃದ್ಧಿಗೊಂಡ ಅಂಶಗಳು ವಿಶಾಲ ಸಮಾಜದಲ್ಲಿ ಬಲವಾಗಿ ಬೇರೂರುತ್ತಿವೆ.

★ ಶಿಕ್ಷಣವು ಮಕ್ಕಳಲ್ಲಿ ಅಗತ್ಯ ಬೌದ್ಧಿಕ ಶಿಸ್ತು, ಸಾಮಾಜಿಕ ಸೌಶೀಲ್ಯತೆ, ಬೌದ್ಧಿಕತೆ, ವಿಮರ್ಶಾತ್ಮಕವಾದ ಆಲೋಚನೆ. ಅಮೂರ್ತ ಭಾವನೆ, ವಿವೇಚನಾತ್ಮಕ ನ್ಯಾಯವನ್ನು ತಿಳಿಸುವಲ್ಲಿ ಸ್ವಂತಿಕೆ, ಸೃಜನಶೀಲತೆ, ಸ್ಫೂರ್ತಿಗಳನ್ನು ಬೆಳಸುವಲ್ಲಿ ಸಾಮಾಜಿಕ ಪರಿವರ್ತನೆಯಡಿ ಪ್ರಧಾನ ಪಾತ್ರ ವಹಿಸುತ್ತದೆ.

★ ಪ್ರಾಥಮಿಕ, ಪ್ರೌಢ ಹಾಗೂ ತಾಂತ್ರಿಕ ಹಂತದಲ್ಲಿ ಔಪಚಾರಿಕ, ಅನೌಪಚಾರಿಕ, ಶಾಲಾರಹಿತ ಶಿಕ್ಷಣದ ಮೂಲಕ. ಅಚ್ಚುಕಟ್ಟನ್ನೂ, ವೃತ್ತಪತ್ರಿಕೆಗಳು, ಪುಸ್ತಕಗಳು, ಬಾನುಲಿ ದೂರದರ್ಶನ, ಗಣಕಯಂತ್ರ, ಸಮೂಹ ಮಾಧ್ಯಮಗಳ ಮೂಲಕ ವಿವಿಧ ವರ್ಗಗಳ ವಿವಿಧ ವಯೋಮಿತಿಯ ಲಕ್ಷೋಪಲಕ್ಷ ಜನರಿಗೆ ಜ್ಞಾನ ಪ್ರಸಾರವನ್ನೂ ಮಾಡಿ ಕೌಶಲ್ಯ ಗಳಿಕೆಗೆ ಉತ್ತೇಜನ ನೀಡಿ ಉತ್ತಮ ಜೀವನ ವಿಧಾನಕ್ಕೆ ಪ್ರೋತ್ಸಾಹಿಸಿ ಉತ್ತಮ ಸಾಮಾಜಿಕ ಪರಿವರ್ತನೆಗೆ ಪೋಷಕವಾಗಿದೆ.

★ ಶಿಕ್ಷಣವು ಸಂಪ್ರದಾಯ ಮುಗ್ಧತೆ, ಮೂಢನಂಬಿಕೆ, ಕಂದಾಚಾರ ಕಟ್ಟಳೆಗಳನ್ನೂ, ದುಷ್ಟಪದ್ಧತಿಯನ್ನು ದೂರಮಾಡಿ ಭೌತಿಕ ಹಾಗೂ ಅಭೌತಿಕ ಸಂಪನ್ಮೂಲಗಳನ್ನು ಗುರುತಿಸಲು ಅಳವಡಿಸಿಕೊಳ್ಳಲು ಉತ್ತೇಜಿಸಿ, ಸಾಮಾಜಿಕ ಹಾಗೂ ಆರ್ಥಿಕ ಪರಿವರ್ತನೆಗೆ ಸಹಾಯಕವಾಗುತ್ತವೆ.

★ ಇತ್ತೀಚಿನ ಶಾಲಾ ಪಠ್ಯಕ್ರಮಗಳು ಸಮಾಜದ ಪ್ರಗತಿಪರ ಒಲವುಗಳನ್ನು ಪ್ರತಿಬಿಂಬಿಸುವ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ.

★ ಮಕ್ಕಳನ್ನು ಶಾಲಾ ಆಡಳಿತ ಮತ್ತು ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸಿ ಅವರಲ್ಲಿ ನಾಯಕತ್ವ ಗುಣಗಳ ಪೋಷಣೆಗೆ ಸಹಾಯಕವಾಗುವಂತೆ ಮಾಡಿ ಪ್ರಜಾಪ್ರಭುತ್ವ ವ್ಯವಸ್ಥೆಯ ಅಭ್ಯಾಸ ಕ್ರಮಕ್ಕೆ ತರಬೇತಿ ನೀಡಲಾಗುತ್ತಿದೆ.

★ ಸಾರ್ವತ್ರಿಕ ಚುನಾವಣಾ ತತ್ವವನ್ನು ವಿಶೇಷ ಹಕ್ಕನ್ನಾಗಿ ಪಡೆದಿರುವ ಸಮಾಜದಲ್ಲಿ ಸ್ಪರ್ಧಿಸಿರುವ ಮತದಾರರ ಗುಣ ಲಕ್ಷಣಗಳು ಕಾರ್ಯಕ್ಷಮತೆಯನ್ನು ಅತ್ಯಂತ ಬುದ್ಧಿವಂತಿಕೆ ಯಿಂದ ತಿಳಿಸಿಕೊಡುವಲ್ಲಿ ಶಿಕ್ಷಣ ಬಹುಮುಖ್ಯ ಪಾತ್ರ ವಹಿಸುತ್ತದೆ.

★ ಶಿಕ್ಷಣ ಹಾಗೂ ಸಾಮಾಜಿಕ ಬದಲಾವಣೆಗಳು ದ್ವಿಪಥ ಸಂಚಾರಿಗಳಂತಿದ್ದು, ಶಿಕ್ಷಣ ಪರಿಪಕ್ವ ಸಂಸ್ಕೃತಿಯನ್ನು ಸಂರಕ್ಷಿಸಿ, ಸುಧಾರಿಸಿ ವರ್ಗಾಯಿಸುವ ಸಾಧನವೆನಿಸಿದೆ.

★ ಶಾಲೆಯು ಪಠ್ಯವಸ್ತುವನ್ನು ಕೂಡಿಕೊಂಡು ಯೋಜನೆ, ಸಾಮಾಜಿಕ ಮೌಲ್ಯ ಹಾಗೂ ಬದಲಾವಣೆಗಳ ನಮೂನೆಗಳನ್ನು ಪ್ರತಿಬಿಂಬಿಸುತ್ತದೆ.

ಸಮಾಜವು ಬದಲಾದ ಸನ್ನಿವೇಶಗಳಲ್ಲಿ ತನ್ನ ಆಸೆ ಆಕಾಂಕ್ಷೆ, ಅಭಿಪ್ರಾಯ – ಇವುಗಳಿಗೆ ಅನುಗುಣವಾಗಿ ಶಾಲೆಯನ್ನು ಪುರಸ್ಕರಿಸಿ ತನ್ನ ಕೆಲಸವನ್ನು ಯೋಜಿಸಿ ವಿಮರ್ಶಿಸುತ್ತದೆ.

ಒಟ್ಟಿನಲ್ಲಿ ಶಾಲೆಯು ಸಮಾಜದ ಅಗತ್ಯತೆ, ಆಸೆ, ಆಕಾಂಕ್ಷೆ ಇವುಗಳಿಗನುಗುಣವಾಗಿ ಶಿಕ್ಷಣ ನೀಡುತ್ತಿದ್ದು ಸಮಾಜವೂ ಸಹ ಸಾಮಾಜಿಕ ಮೌಲ್ಯ, ನೀತಿ ನಿಯಮ ಹಾಗೂ ಬದಲಾವಣೆಯನ್ನು ಪ್ರತಿಬಿಂಬಿಸಿ, ಸಮಾಜದ ಅವಶ್ಯಕತೆಗೆ ಪೋಷಕವಾಗುವ ರೀತಿಯಲ್ಲಿ ಶಾಲಾ ಶಿಕ್ಷಣದ ಕಾರ್ಯಕ್ರಮಗಳನ್ನು ಸುಧಾರಿಸಲು ಪ್ರಯತ್ನಿಸುತ್ತದೆ.

ಇಂದಿನ ಶಿಕ್ಷಣದಲ್ಲಿ ಸಾಮಾಜಿಕ ಬದಲಾವಣೆಯು ತನ್ನದೇ ಆದ ಲಕ್ಷಣಗಳು ಸ್ವರೂಪಗಳು ಹಾಗೂ ಅಂಶಗಳಿಂದ ಕೂಡಿದೆ.

ಸಾಮಾಜಿಕ ಪರಿವರ್ತನೆಯು ಮಾನವನ ಪರಿವರ್ತನೆಯೆನಿಸಿದ್ದು ಗತಿಶೀಲವಾಗಿದ್ದು ಎಲ್ಲಾ ಕಾಲಕ್ಕೂ, ಸಮಾಜದಲ್ಲಿ ಜರುಗುತ್ತಿರುವ ಕಾರ್ಯವಾಗಿದೆ. ಇದು ನಿಯೋಜಿತ ಮತ್ತು ಅನಿಯೋಜನಿತವೆನಿಸಿದ್ದು ವಸ್ತುನಿಷ್ಠ ಕಲ್ಪನೆಯಾಗಿದೆ.

ಪರಿವರ್ತನೆ ಸಮಾಜದ ಅಂತರಂಗಿಕ ಗುಣ, ಅನೇಕ ರೀತಿಯ ಆಂತರಿಕ ಮತ್ತು ಬಾಹ್ಯ ಒತ್ತಡಗಳು ಹಾಗೂ ಇತರ ಕಾರಣಗಳಿಂದ ಸಮಾಜವು ಪರಿವರ್ತನೆ ಹೊಂದುವುದು.

ಸಾಮಾಜಿಕ ಬದಲಾವಣೆಗೆ ಸಂಬಂಧಿಸಿದ ಸ್ವರೂಪಗಳು :

೧) ರಾಜಕೀಯ ಬದಲಾವಣೆ, ೨) ಆರ್ಥಿಕ ಬದಲಾವಣೆ, ೩) ಧಾರ್ಮಿಕ ಬದಲಾವಣೆ, ೪) ನೈತಿಕ ಬದಲಾವಣೆ, ೫) ವೈಜ್ಞಾನಿಕ ಬದಲಾವಣೆ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದಿಂದ ಇಲ್ಲಿಯವರೆಗೆ ಪ್ರಪಂಚದಲ್ಲಿ ಅನೇಕ ಪರಿವರ್ತನೆಗಳು ಜರುಗಿವೆ. ಭಾರತವು ಸ್ವತಂತ್ರವಾಯಿತು. ಅದರಂತೆಯೇ ಬ್ರಹ್ಮದೇಶ, ಇಂಡೋನೇಶಿಯಾ, ಶ್ರೀಲಂಕಾ, ಫ್ರಾನ್ಸ್ ಹಾಗೂ ಆಫ್ರಿಕಾದ ಕೆಲವು ರಾಷ್ಟ್ರಗಳೂ ಸ್ವತಂತ್ರವಾದವು. ಇತ್ತೀಚೆಗೆ ಸೋವಿಯತ್ ಯೂನಿಯನ್‌ದಿಂದ ಕೆಲವು ಭಾಗಗಳು ಸಿಡಿದು ಹೋಗಿ ಸ್ವತಂತ್ರ ರಾಷ್ಟ್ರಗಳಾಗಿ ಬದಲಾಗಿವೆ.

೧) ಸಂವಿಧಾನಾತ್ಮಕ ಬದಲಾವಣೆ, ೨) ಆಧುನೀಕರಣದ ಬದಲಾವಣೆ, ೩) ಕಾನೂನಿನ ಬದಲಾವಣೆ, ೪) ಹಿಂದೂ ಮತೀಕರಣದ ಬದಲಾವಣೆ, ೫) ಪಾಶ್ಚಾತ್ಯೀಕರಣದ ಬದಲಾವಣೆ, ೬) ರಾಜಕೀಯಕರಣದ ಬದಲಾವಣೆ, ೭) ಕೈಗಾರೀಕರಣದ ಬದಲಾವಣೆ, ೮) ನಗರೀಕರಣದ ಬದಲಾವಣೆ.

ಈ ಎಲ್ಲಾ ಅಂಶಗಳಿಗೆ ಸಂಬಂಧಿಸಿದಂತೆ ಪರಿವರ್ತನೆಗಳು ಇಂದು ಉಂಟಾಗುತ್ತಿದ್ದು ಈ ಎಲ್ಲಾ ಅಂಶಗಳೂ ಶಿಕ್ಷಣದಲ್ಲಿ ಅಳವಡಿಸಲ್ಪಟ್ಟಿವೆ. ಇಂದಿನ ಮಕ್ಕಳಿಗೆ ನಾಳಿನ ನಾಡಿನ, ನಾಗರಿಕ ಸಮಾಜದ ಪ್ರಜೆಗಳಾದ್ದರಿಂದ ಅವರಿಗೆ ಶಿಕ್ಷಣದ ಮೂಲಕ ಈ ಬದಲಾವಣೆಗಳ ಬಗ್ಗೆ ಹಾಗೂ ಪ್ರತಿಯೊಂದು ಅಂಶವೂ ಯಾವ ರೀತಿ ಪ್ರಭಾವವನ್ನು ಬೀರುತ್ತಿದೆ ಎಂಬುದರ ಬಗ್ಗೆ ಸೂಕ್ಷ್ಮ ಪರಿಚಯ ಮಾಡಿಕೊಡುವುದೇ ಇಲ್ಲಿಯ ಮುಖ್ಯ ಉದ್ದೇಶವಾಗಿದೆ.

ಹೀಗೆ ಶಿಕ್ಷಣಸಂಸ್ಥೆಗಳು ಸಾಮಾಜಿಕ ನಿಯಂತ್ರಣ ಹಾಗೂ ಸಾಮಾಜಿಕ ಬದಲಾವಣೆಯ ಸಶಕ್ತ ಸಾಧನವಾಗಿರುವುದಲ್ಲದೆ ಅವುಗಳ ಉದ್ದೇಶಗಳ ಸಾಧನೆಗಾಗಿ ಅನೇಕ ಮಾಧ್ಯಮಗಳನ್ನು ಹೊಂದಿದೆ. ಅವು ಅಪೇಕ್ಷಿತ ಸಾಮಾಜಿಕ ಮನೋಭಾವವನ್ನು ಎತ್ತಿ ಹಿಡಿದು ಸಾಮಾಜಿಕ ಪೂರ್ವಾಗ್ರಹ ಪೀಡನವನ್ನೂ ಋಣಾತ್ಮಕ ಮೌಲ್ಯಗಳನ್ನೂ ದಮನ ಮಾಡುವಲ್ಲಿ ಶ್ರಮಿಸುತ್ತಿವೆ. ಇಂದಿನ ದಿನಗಳಲ್ಲಿ ಶಾಲೆಯ ಕ್ರಿಯಾತ್ಮಕ ಚಟುವಟಿಕೆ ಹಾಗೂ ಶಿಕ್ಷಣದ ಪಾತ್ರವಿಲ್ಲದೆ ಸಾಮಾಜಿಕ ಬದಲಾವಣೆ ಅಪೂರ್ಣವಾಗುತ್ತದೆ ಎಂದು ಹೇಳುತ್ತಿರುವುದು ತಿಳಿದಿರುವ ವಿಷಯ. ಸಾಮಾಜಿಕ ಬದಲಾವಣೆಯನ್ನು ಚುರುಕುಗೊಳಿಸುತ್ತಿರುವ ಶಿಕ್ಷಣ ಸಂಸ್ಥೆಗಳು ಅಥವಾ ಶಿಕ್ಷಣಕ್ಷೇತ್ರ ಅಗತ್ಯವಾದ ಮಾರ್ಗದರ್ಶನ ನೀಡಿ ಬದಲಾಗುವ ಸಮಾಜದ ಸಂಕೀರ್ಣತೆಗಳನ್ನು ಅರಿತು ಅದರೊಡನೆ ಮಕ್ಕಳು ಹೊಂದಿಕೊಂಡು ಹೋಗಲು ಪ್ರಭಾವ ಬೀರುತ್ತಿವೆ. ಮಕ್ಕಳ ಸೃಜನಾತ್ಮಕ, ವಿಮರ್ಶಾತ್ಮಕ ಆಲೋಚನೆಗೆ ಅವಕಾಶ ಮಾಡಿಕೊಟ್ಟು ರಾಷ್ಟ್ರಜೀವನವನ್ನು ಸುಪುಷ್ಟಗೊಳಿಸಿ ತಮ್ಮ ಉತ್ತಮ ಕೊಡುಗೆಗಳನ್ನು ನೀಡಲು ಪ್ರಜಾಪ್ರಭುತ್ವ ಆಧುನಿಕ ಸಮಾಜದಲ್ಲಿ ಒದಗುವ ಜವಾಬ್ದಾರಿಗಳನ್ನು





ನಿರ್ವಹಿಸುವ ತರಬೇತಿ ನೀಡುತ್ತಿದೆ. ಮಾನವನ ಜೀವನದಲ್ಲಿ ಸಾಮಾಜಿಕ ಸ್ವರೂಪ, ವೈಜ್ಞಾನಿಕ, ತಾಂತ್ರಿಕ ಅಭಿವೃದ್ಧಿಯ ವ್ಯಾಪ್ತಿ ಇತಿಹಾಸಗಳನ್ನೂ ಅತ್ಯಾಧುನಿಕ ಉಪಕರಣಗಳ ಅಳವಡಿಕೆ. ಬೋಧನಾ ವಿಧಾನದಿಂದ ಮನದಟ್ಟು ಮಾಡಲು ವೈಜ್ಞಾನಿಕ, ತಾಂತ್ರಿಕ, ತಾತ್ವಿಕ ಅಂಶಗಳ ಜ್ಞಾನಮೂಡಿಸಲು ಮಕ್ಕಳ ವಿಮರ್ಶಾತ್ಮಕ ಬುದ್ಧಿಯನ್ನು ಕುದುರಿಸಲು ನೂತನ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಳ್ಳುವಂತೆ ಮಾಡುತ್ತಿದೆ.

ಸಾಂಸ್ಕೃತಿಕ ತೌಲನಿಕ ಅಧ್ಯಯನಕ್ಕೆ ಅವಕಾಶ, ಪ್ರಚಾರ ಮತ್ತು ನೈಜಜ್ಞಾನಗಳ ನಡುವಿನ ವ್ಯತ್ಯಾಸಗಳನ್ನು ತಿಳಿಸುವಿಕೆ, ಸಮಾಜದ ಜವಾಬ್ದಾರಿಯುತ ಸದಸ್ಯನಿಗಿರಬೇಕಾದ ಅರ್ಹತೆಗಳ ಅರಿವು ವೈಯಕ್ತಿಕವಾಗಿ ಮತ್ತು ಸ್ವತಂತ್ರವಾಗಿ ಕೆಲಸಮಾಡುವ ಚತುರತೆ, ಕ್ರಿಯಾತ್ಮಕ ನೀತಿ-ನಿಯಮ ನಿಬಂದನೆಗಳ ಆಚರಣೆ, ನವನವೀನ ಸಂಶೋಧನೆ, ಸುಧಾರಣೆ, ಸುವ್ಯವಸ್ಥಾ ಕಾರ್ಯಕ್ರಮಗಳ ಅಳವಡಿಕೆ, ಇವೇ ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅದಕ್ಕನುಗುಣವಾಗಿ ಇಂದಿನ ಶಿಕ್ಷಣ ಪದ್ಧತಿಯು ವಿವಿಧ ಅಂಶಗಳನ್ನು ಮನವರಿಕೆ ಉಂಟುಮಾಡುವಲ್ಲಿ ಕಾರ್ಯನಿರ್ವಹಿಸುತ್ತಾ ಬಂದಿದೆ. ಹೀಗೆ ಇಂದಿನ ಶಿಕ್ಷಣ ಪದ್ಧತಿಯು ಧನಾತ್ಮಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆಲಸ ಮಾಡುತ್ತಿದೆ.

ಅಷ್ಟೇ ಅಲ್ಲದೆ ಸಮಾಜವೂ ಸಹ ವ್ಯಕ್ತಿಗಳ ಜ್ಞಾನಮಟ್ಟ, ವಿಚಾರಶಕ್ತಿಗಳ ಬೆಳವಣಿಗೆಯೊಂದಿಗೆ ವಿಜ್ಞಾನ, ಕೈಗಾರಿಕೆ ಇವೇ ಮೊದಲಾದ ಪ್ರಮುಖ ಕ್ಷೇತ್ರಗಳಲ್ಲಿ ಬದಲಾವಣೆಯಾಗುತ್ತಿರುವುದು ಗಮನಿಸಿ ಈ ಬದಲಾವಣೆಗೆ ತಕ್ಕಂತೆ ಶಿಕ್ಷಣ ಹಾಗೂ ಪಠ್ಯಕ್ರಮಗಳನ್ನು ಬದಲಾಯಿಸುತ್ತಾ ಬಂದಿದೆ. ಈ ಹಿನ್ನೆಲೆಯಲ್ಲಿ ಸಮಾಜವು–

(೧) ಆಯಾ ದೇಶದ ಆದರ್ಶಗಳು, ತತ್ತ್ವಗಳು, ಶಿಕ್ಷಣದ ಗುರಿ, ಬೋಧನಾ ವಿಷಯ ಬೋಧನಾ ಪದ್ಧತಿಗಳ ಮೇಲೆ ತನ್ನ ಪ್ರಭಾವ ಬೀರಿದೆ.

(೨) ಪ್ರತಿಯೊಂದು ರಾಷ್ಟ್ರದ ಆಯಾ ಕಾಲದ ವರ್ಗಗಳ ಮೌಲ್ಯಗಳ ಶಿಕ್ಷಣ ಗುರಿಗಳನ್ನು ಪ್ರತಿಬಿಂಬಿಸುತ್ತದೆ.

(೩) ಎಲ್ಲರಿಗೂ ಸರಿಸಮಾನವಾಗಿ ಶಿಕ್ಷಣ ದೊರೆಯುವಂತೆ ಮಾಡಿ, ಜಾತ್ಯಾತೀತ ರಾಷ್ಟ್ರವನ್ನು ನಿರ್ಮಿಸಿ ಶಿಕ್ಷಣದ ಪ್ರಕ್ರಿಯೆಯನ್ನು ನಿರ್ಧರಿಸಿದೆ.

(೪) ಅನಕ್ಷರತೆಯನ್ನು ಹೋಗಲಾಡಿಸಿ ಏಕತೆಯನ್ನು ಕಾಪಾಡಿಕೊಂಡು ಬರಲು ಪ್ರಯತ್ನಿಸುತ್ತಿದೆ.

ಇಂದು ಸಮಾಜದಲ್ಲಿ ಎಲ್ಲಾ ವರ್ಗದ ಜನರಿದ್ದಾರೆ; ವಿವಿಧ ವೃತ್ತಿಯವರಿದ್ದಾರೆ. ಸಮಾಜವು ಶಾಲೆ, ಕಾಲೇಜುಗಳನ್ನು ತೆರೆಯುವುದರ ಮೂಲಕ ಎಲ್ಲರಿಗೂ ಶಿಕ್ಷಣ ಪಡೆಯಲು ಅವಕಾಶ ಕಲ್ಪಿಸುತ್ತಿದೆ. ಜಾತ್ರೆ, ಸಾಂಸ್ಕೃತಿಕ ಮೇಳ ಮುಂತಾದವುಗಳ ಮೂಲಕ ಅರಿವು ಮೂಡಿಸುತ್ತಿದೆ. ಅಲ್ಲದೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ, ಶಕ್ತಿ ಪ್ರದರ್ಶನ, ಸ್ಪರ್ಧಾತ್ಮಕ ಚಟುವಟಿಕೆಗಳನ್ನು ನಡೆಸಿ ಅದರಲ್ಲಿ ಎಲ್ಲರೂ ಭಾಗವಹಿಸುವಂತೆ ಅವಕಾಶ ನೀಡುವುದರ ಮೂಲಕ ವಿವಿಧ ವ್ಯಕ್ತಿಗಳ ವೈಯಕ್ತಿಕ ಸಾಮರ್ಥ್ಯ, ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುತ್ತಿದೆ. ಹೀಗೆ ಸಮಾಜವು ತನ್ನದೇ ಆದ ರೀತಿಯಲ್ಲಿ ಶಿಕ್ಷಣದ ಮೇಲೆ ಪ್ರಭಾವ ಬೀರಿದೆ.

ಒಟ್ಟಿನಲ್ಲಿ ಶಿಕ್ಷಣವೆಂಬುದು ಹಿಂದಿನಿಂದ ಇಂದಿನ ವರೆಗೂ ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆಯಾಗುತ್ತಿರುವ ಅತ್ಯುತ್ತಮ ಆಸ್ತಿ. ಇಂಥ ಶಿಕ್ಷಣವು, ದೇಶ, ಕಾಲ, ಪರಿಸ್ಥಿತಿ ಹಾಗೂ ತತ್ತ್ವಜ್ಞಾನಿಗಳ, ರಾಜಕಾರಣಿಗಳ, ವಿಚಾರವಾದಿಗಳ ಅನುಭವ, ತಿಳಿವಳಿಕೆ, ದೃಷ್ಟಿಕೋನದಿಂದ ಸನ್ನಿವೇಶ ಹಾಗೂ ಪರಿಸರಕ್ಕೆ ಅನುಗುಣವಾಗಿ ಬದಲಾವಣೆ ಒಳಪಟ್ಟಿರುವುದರಲ್ಲಿ ವಿಶೇಷವೇನೂ ಇಲ್ಲ. ಆದರೆ ಈ ಬದಲಾವಣೆಯಿಂದ ವ್ಯಕ್ತಿಗಳ ದೃಷ್ಟಿಕೋನ, ಯೋಚನಾ ಮಟ್ಟ, ಅರ್ಥೈಸಿಕೊಳ್ಳುವಿಕೆ ಹಾಗೂ ವಿವಿಧ ಕೌಶಲ್ಯಗಳೂ ಸಹ ಬದಲಾವಣೆಗೆ ಒಳಪಟ್ಟಿರುವುದು ಔಚಿತ್ಯಪೂರ್ಣವಾಗಿದೆ. ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ ಪರಸ್ಪರ ವಿಷಯಗಳೆನಿಸಿದ್ದು ಸಮಾಜ ಬದಲಾವಣೆಗೆ ಒಳಪಟ್ಟಂತೆ ಶಿಕ್ಷಣದ ಅರ್ಥಸ್ವರೂಪ. ಲಕ್ಷಣಗಳೂ ಬದಲಾಗಿದೆ. ಅದೇ ರೀತಿ ಶಿಕ್ಷಣವನ್ನು ಪಡೆದ ರೀತಿ ನೀತಿ, ಕಲಿಕೆಯ ವಿಧಾನ ಬದಲಾವಣೆಯಾದಂತೆ ಸಮಾಜದ ರೀತಿ, ನೀತಿಗಳು ಇವುಗಳಿಗನುಗುಣವಾಗಿ ಬದಲಾವಣೆಯಾಗಿವೆ. ಆದ್ದರಿಂದ ಶಿಕ್ಷಣ ಹಾಗೂ ಸಾಮಾಜಿಕ ಬದಲಾವಣೆ ಎಂಬ ವಿಷಯಗಳು ದ್ವಿಮುಖ ಪ್ರಕ್ರಿಯೆ ಎಂದು ಹೇಳಿದರೆ ತಪ್ಪಾಗಲಾರದು.

ಸಮಾಜದ ಬದಲಾವಣೆಯ ಜೊತೆ ಜೊತೆಗೆ ಸಮಾಜದ ಸಾಧನೆ, ವ್ಯಕ್ತಿಗಳ ಪ್ರತಿಭೆ ಮುಖ್ಯವಾಗಿದ್ದು ವ್ಯಕ್ತಿಗಳಿಗೆ ಬೆಳವಣಿಗೆಗೆ ಶಿಕ್ಷಣ ಅತ್ಯವಶ್ಯಕವಾಗಿದ್ದು, ಅದಕ್ಕೆ ಸೂಕ್ತಪರಿಸರವನ್ನು ಶಿಕ್ಷಣ ಒದಗಿಸಿಕೊಡಬೇಕು. ಶಿಕ್ಷಣವು ಸಾಮಾಜಿಕ ಬದಲಾವಣೆಯಲ್ಲಿ ಮುಖ್ಯವಾಗಿದ್ದು, ವ್ಯಕ್ತಿಗಳಲ್ಲಿ ಸಮಾಜದಲ್ಲಿ ಅನೇಕ ಶಾಶ್ವತ ಬದಲಾವಣೆಗಳನ್ನು ಉಂಟುಮಾಡುವಲ್ಲಿ ಇನ್ನೂ ಹೆಚ್ಚಿನ ರೀತಿಯಲ್ಲಿ ಪ್ರಯತ್ನಿಸಬೇಕಾಗಿದೆ.

**ಕೃಪೆ : ಚನ್ನ ಶಿಕ್ಷಣ ಸಿರಿ**

❋

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೦೦ | ಶ್ರೀಮತಿ ಹೆಚ್. ಎಸ್.ಸಿದ್ಧಗಂಗಮ್ಮ<br>ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ಬಿ. ಹೆಚ್. ರಸ್ತೆ, ತುಮಕೂರು. | ೨೦೦೧.೦೦<br>(೧ನೇ ಕಂತು) |
| ೪೦೧. | ಶ್ರೀ ಚಂದ್ರಯ್ಯ<br>ಅಸಿಸ್ಟೆಂಟ್, ಕೆ. ಪಿ. ಟಿ. ಸಿ. ಎಲ್.,<br>ವಿಭಾಗ ಕಛೇರಿ, ಕೋಲಾರ-೧೦೧. | ೧೦೦೫.೦೦<br>(೨ನೇ ಕಂತು) |
| ೪೦೨. | ಶ್ರೀಮತಿ. ಶೋಭಾ ಚಂದ್ರಶೇಖರಯ್ಯ,<br>ಮಲ್ಲಿಕಾರ್ಜುನನಿಲಯ, ೪ನೇ ಮೈನ್,<br>ವಿದ್ಯಾನಗರ, ತುಮಕೂರು-೨, | ೫೦೦೧-೦೦ |
| ೪೦೩. | ಶ್ರೀ ಬಿ. ಬಿ. ಶಂಭು<br>ಕಾಫಿ ಬೆಳೆಗಾರರು,<br>ಕುಂಬರಹಳ್ಳಿ ಎಸ್ಟೇಟ್ ಮತ್ತು ಅಂಚೆ,<br>ಎಸಳೂರು ಮಾರ್ಗ,<br>ಹಾಸನ ಜಿಲ್ಲೆ. | ೫೦೦೧-೦೦ |
| ೪೦೪. | ಶ್ರೀ ಬಿ. ಬಿ. ಪಾಲಾಕ್ಷ<br>ಕಾಫಿ ಬೆಳೆಗಾರರು, ಬಾಳ್ಳುಪೇಟೆ,<br>ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ | ೨೧೦೧-೦೦ |
| ೪೦೫. | ಶ್ರೀ ಕೆ. ಆರ್. ವಿರೂಪಾಕ್ಷಯ್ಯ,<br>ನಂ. ೧೧೬೩, ೧ನೇ ಎ ಕ್ರಾಸ್,<br>೧ನೇ ಮುಖ್ಯರಸ್ತೆ, ಬನಶಂಕರಿ ೩ನೇ ಹಂತ,<br>ಹೊಸಕೇರಹಳ್ಳಿ ಬಡಾವಣೆ,<br>ಬೆಂಗಳೂರು- ೮೫. | ೧೦೦೦-೦೦ |
| ೪೦೬. | ಶ್ರೀಮತಿ ಸುಭದ್ರಮ್ಮ<br>ನಂ. ೯೩, ೩ನೇ ಕ್ರಾಸ್, ೬ನೇ ಬ್ಲಾಕ್,<br>ಹೊಸಕೇರಹಳ್ಳಿ<br>ಬೆಂಗಳೂರು-೫೬೦ ೦೮೫. | ೧೦೦೦-೦೦<br>(೨ನೇ ಕಂತು) |
| ೪೦೭. | ಶ್ರೀಮತಿ ಮಂಗಳಗೌರಮ್ಮ ದೇಶಶೆಟ್ಟಪ್ಪ<br>ಕೇರಾಫ್, ಶ್ರೀ ಸಿ. ಭಾಸ್ಕರ್<br>ಜವಳಿ ವ್ಯಾಪಾರಿಗಳು, ಬಸವೇಶ್ವರನಗರ,<br>ವಿಜಯಪುರ, ದೇವನಹಳ್ಳಿ ತಾಲ್ಲೂಕು.<br>ಕೋಲಾರ ಜಿಲ್ಲೆ. | ೫೦೦೧-೦೦ |
| ೪೦೮. | ಶ್ರೀ. ವೈ. ಎಸ್. ಯಡಿಯೂರು,<br>ನಿವೃತ್ತ ಎಗ್ಸಿಕ್ಯೂಟಿವ್ ಇಂಜಿನಿಯರ್,<br>ನಂ. ೩೯೨ ೪ನೇ ಕ್ರಾಸ್,<br>ಸಿದ್ಧಾರ್ಥ ಬಡಾವಣೆ,<br>ಮೈಸೂರು - ೫೭೦೦೧೧ | ೧೦೦೦-೦೦<br>(೨ನೇ ಕಂತು) |
| ೪೦೯. | ಶ್ರೀ ಎಂ. ನಂಜುಂಡಪ್ಪ<br>ಕೇರಾಫ್ ಎಸ್. ಎನ್. ಟೈಲರ್ಸ್,<br>ಹೆಗ್ಗನಹಳ್ಳಿ, ಪೀಣ್ಯಾ ೨ನೇ ಹಂತ,<br>ವಿಶ್ವನೀಡಂ ಅಂಚೆ,<br>ಗಂಧದನಗರ ಮುಖ್ಯರಸ್ತೆ,<br>ಬೆಂಗಳೂರು -೫೬೦೦೯೧ | ೧೦೦೧-೦೦<br>(೨ನೇ ಕಂತು) |
| ೪೧೦. | ಕುಃ ಮನೋನ್ಮಯಿ ಪಡುಬಿದರಿ,<br>ಕೇರಾಫ್ : ಶ್ರೀ ಅನಂತಪಡುಬಿದರಿ,<br>ನಂ. ೮, ಸಪ್ನಾ ಅಪಾರ್ಟ್‌ಮೆಂಟ್ಸ್,<br>ಹೊಸ ಅಸ್ತ್ರಂ ಕಟ್ಟಡ,<br>ಸುಭಾಶ್ ಚೌಕ, ಖಲುಕಾರಿಗಾನ್, ಥಾಣೆ<br>ಮುಂಬಯಿ - ೪೦೦೬೦೫ | ೨೦೦೫-೦೦ |
| ೪೧೧. | ಶ್ರೀ ತುಲಸೀರಾಮಯ್ಯ,<br>ನಂ. ೬೩, ೪ನೇ ಮುಖ್ಯರಸ್ತೆ, ೬ನೇ ಕ್ರಾಸ್,<br>ಮಹಾಲಕ್ಷ್ಮಿ ಬಡಾವಣೆ, (ಹಿಂಭಾಗ),<br>ಬೆಂಗಳೂರು-೮೬ | ೭೦೦-೦೦<br>(೨ನೇ ಕಂತು) |

(ಮುಂದುವರಿಯುತ್ತದೆ)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೨೯೧. | ಕೆ.ಎಸ್. ಸಿದ್ಧಗಂಗಾರಾಧ್ಯ<br>ನಂ. ೧೩೯, ನೃಪತುಂಗನಗರ,<br>ಕೊತ್ತನೂರುದಿಣ್ಣೆ ಮುಖ್ಯರಸ್ತೆ<br>ಜೆ.ಪಿ.ನಗರ, ೭ನೇ ಹಂತ<br>ಬೆಂಗಳೂರು - ೭೮ | ೧೦೦೧.೦೦ |
| ೨೯೨. | ಶ್ರೀ ಪ್ರಕಾಶ್‌ಬಾಬು<br>ನಂ. ೬೪೪೯, ಎನ್.ಲಿವ್.ಓ.ಎ.ಕೆ.<br>ಸಿಟಿ, ಪಿಯೋರಿಯಾ, ಇಲಿನಾಯ್ಸ್,<br>೬೧೪೧೫, ಯು. ಎಸ್. ಎ. | ೩೦೦೦-೦೦ |
| ೨೯೩. | ಶ್ರೀ ಡಿ. ರೇವಣಸಿದ್ಧಯ್ಯ<br>೧ನೇ ದರ್ಜೆ ಗುತ್ತಿಗೆದಾರರು,<br>ನಂ. ೯೬೦, ೪ನೇ ಬ್ಲಾಕ್, ರಾಜಾಜಿನಗರ<br>ಬೆಂಗಳೂರು-೧೦ | ೨೨೫೦-೦೦ |
| ೨೯೪. | ಶ್ರೀ ಎ. ಎಸ್. ಮೂರ್ತಿ,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ<br>ಪ್ರೌಢಶಾಲೆ, ಪುರುಷನಹಳ್ಳಿ,<br>ದೊಡ್ಡಬಳ್ಳಾಪುರ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧೦೦೧-೦೦ |
| ೨೯೫. | ಶ್ರೀ ಜಿ. ಎಂ. ನಾಗಭೂಷಣ,<br>ರಾಜು ಸೈಕಲ್ ಮಾರ್ಟ್,<br>ಎಸ್. ಎಸ್. ಪುರಂ, ತುಮಕೂರು. | ೧೦೦೧-೦೦ |
| ೨೯೬. | ಶ್ರೀ ಎಸ್. ರುದ್ರೇಶ್,<br>ಚೀಫ್ ಎಲೆಕ್ಟ್ರಿಕಲ್ ಇನ್ಸ್‌ಪೆಕ್ಟರ್<br>ನೆಲಅಂತಸ್ತು, ಮೈಸೂರು ಬಿಲ್ಡಿಂಗ್<br>ಜೆ. ಸಿ.ರಸ್ತೆ, ಬೆಂಗಳೂರು - ೧೮ | ೧೦೦೧-೦೦ |
| ೨೯೭. | ಶ್ರೀ ಬಿ. ಆರ್. ರೇಣುಕ,<br>ನಂ. ೧೨೭, ೨ನೇ ಮುಖ್ಯ ರಸ್ತೆ,<br>ಚಾಮರಾಜಪೇಟೆ,<br>ಬೆಂಗಳೂರು - ೫೬೦೦೧೮ | ೧೦೦೧-೦೦ |
| ೨೯೮. | ಶ್ರೀ ನಂಜುಂಡಯ್ಯ<br>ನಿವೃತ್ತ ಮುಖ್ಯಶಿಕ್ಷಕರು<br>"ಚನ್ನಕೇಶವ ನಿಲಯ', ೩ನೇ ಕ್ರಾಸ್, ಕುವೆಂಪು ರಸ್ತೆ<br>ರಾಘವೇಂದ್ರನಗರ, ಶೆಟ್ಟಿಹಳ್ಳಿ ರೈಲ್ವೇಗೇಟ್<br>ತುಮಕೂರು. | ೫೦೮-೦೦<br>(೧ನೇ ಕಂತು) |
| ೨೯೯. | ಶ್ರೀ ಬಿ.ಎನ್. ರಾಜು,<br>ಗುರುಕೃಪ ೧ನೇ ಮುಖ್ಯರಸ್ತೆ, ೧ನೇ ಕ್ರಾಸ್<br>ಕುವೆಂಪು ರಸ್ತೆ, ೧ನೇ ಬಿ ಕ್ರಾಸ್<br>ನೃಪತುಂಗ ಬಡಾವಣೆ,<br>ತುಮಕೂರು-೩ | ೧೦೦೧-೦೦ |
| ೩೦೦. | ಶ್ರೀ ಎಸ್. ರಾಮಕೃಷ್ಣ<br>ನಂ. ೧೦೭೩, ಪಟ್ಟಾಭಿರಾಮಶಾಸ್ತ್ರಿ ಲೇನ್<br>ನಗರ್ತಪೇಟೆ ಕ್ರಾಸ್,<br>ಬೆಂಗಳೂರು-೨ | ೧೦೦೧-೦೦ |
| ೩೦೧. | ಶ್ರೀ ವಿ. ಎಂ. ಪರಮೇಶ್ವರಯ್ಯ,<br>"ಶ್ರೀ ನಂಜುಂಡೇಶ್ವರನಿಲಯ',<br>ನಂ. ೧೨೦, ೩ನೇ ಸ್ಟೇಜ್, ೪ನೇ ಬ್ಲಾಕ್<br>ಬಸವೇಶ್ವರ ನಗರ, ಬೆಂಗಳೂರು-೭೯ | ೧೦೦೧-೦೦ |
| ೩೦೨. | ಶ್ರೀ ಬಿ.ಬಿ. ಗುರುಸಿದ್ಧಯ್ಯ. ನಿವೃತ್ತ ಶಿಕ್ಷಕರು,<br>ಮನೆ ನಂ. ೮೫೭, ಕಾಯಿಪೇಟೆ,<br>ಗುಬ್ಬಿ, ತುಮಕೂರು ಜಿಲ್ಲೆ. | ೧೦೦೫-೦೦ |
| ೩೦೩. | ಶ್ರೀ ಪಟೇಲ್ ಶಿವರುದ್ರಯ್ಯ,<br>ಬಿನ್ ಬಸವೇಗೌಡ, ಕೆಂಬಳಲು<br>ತುಮಕೂರು ತಾಲ್ಲೂಕು ಮತ್ತು ಜಿಲ್ಲೆ | ೧೦೦೧-೦೦ |
| ೩೦೪. | ಶ್ರೀ ಸಿದ್ಧಲಿಂಗಯ್ಯ, ಬಿನ್ ಬಸವಣ್ಣ<br>ನಿವೃತ್ತ ಶಿಕ್ಷಕರು, ಕೆಂಬಳಲು,<br>ತುಮಕೂರು ತಾಲ್ಲೂಕು ಮತ್ತು ಜಿಲ್ಲೆ. | ೧೦೦೧-೦೦ |

(ಮುಂದುವರಿಯುತ್ತದೆ)



ಏಪ್ರಿಲ್ ೨೬ ರಂದು ಬಸವ ವೇದಿಕೆ ಏರ್ಪಡಿಸಿದ್ದ 'ಬಸವಶ್ರೀ' ಹಾಗೂ 'ಸಾಹಿತ್ಯಶ್ರೀ' ಪಶಸ್ತಿ ಪ್ರದಾನ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀಶ್ರೀಗಳವರು ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರನ್ನು ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಸಚಿವರು ಹಾಗೂ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದ ಶ್ರೀ ಆಲಂ ವೀರಭದ್ರಪ್ಪ, ಶಾಸಕರಾದ ಶ್ರೀ ವಿ. ಸೋಮಣ್ಣ, ಶ್ರೀ ಎಂ.ವಿ. ರಾಜಶೇಖರನ್ ಮತ್ತು ಬಸವ ವೇದಿಕೆಯ ಕಾರ್ಯಾಧ್ಯಕ್ಷರಾದ ಶ್ರೀ ಸಿ. ಸೋಮಶೇಖರ್ ಅವರು ಉಪಸ್ಥಿತರಿದ್ದರು




ಶ್ರೀ ಗುರುವಂದನ ಮಹೋತ್ಸವ ಸಮಾರಂಭದಲ್ಲಿ ನೂತನ ಅತಿಥಿ ಗೃಹ ಕಟ್ಟಡದ ಉದ್ಘಾಟನೆಯನ್ನು ರಾಜ್ಯ ಗೃಹ ಸಚಿವರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ನೆರವೇರಿಸಿದರು